# ಗಂಧದ ಹುಡಿ

ಬರೆದವರು :

**ಕರ್ಣಾಟಕ ಸಂಘದ ಸದಸ್ಯರು**

ಸಂಪಾದಕರು :

ಜಿ. ಪಿ. ರಾಜರತ್ನಂ



**ಕರ್ಣಾಟಕ ಸಂಘ**

ಸೆಂಟ್ರಲ್ ಕಾಲೆಜ್, ಬೆಂಗಳೂರು

## ಒಳಪಿಡಿ

# ಮಂಗಳಾಶಾಸನ

"ಶ್ರೀ ವಿ. ಸೀ.ಯವರು 'ಕಾಲೆಜ್ ಬರವಣಿಗೆ'ಯ ವಿಷಯದಲ್ಲಿ ನೀವು ಮಾಡುತ್ತಿರುವ ದೊಡ್ಡ ಕೆಲಸದ ವಿಷಯವಾಗಿ ನನಗೆ ವಿವರಿಸಿದ್ದರು. ಕಾಲೇಜುಗಳಲ್ಲಿ ವಿದ್ಯಾರ್ಥಿಗಳ ಚಿತ್ತವೃತ್ತಿಯ ಸಂಸ್ಕರಣೆ, ಅವರ ಸಹಜವಾದ ಪ್ರತಿಭೆಗೆ ಪ್ರೋತ್ಸಾಹ—ಇದಕ್ಕಾಗಿ ಉಪಾಧ್ಯಾಯರು ಇಂಥಾ ಕೆಲಸವನ್ನು ಕೈಗೊಳ್ಳುವುದು ಈಚೆಗೆ ಬಹಳ ಅಪರೂಪವಾಗಿದೆ. ನೀವುಗಳು ಅದಕ್ಕೆ ಮುಂದಾಳುಗಳಾಗಿ ನಿಂತು ದುಡಿಯುತ್ತಿರುವುದು ನಮ್ಮ ದೇಶಕ್ಕೆ ಶುಭೋದರ್ಕವಾದ ವಿಷಯ. ಇದಕ್ಕಾಗಿ ನಾನು ನಿಮ್ಮನ್ನು ಹಾರ್ದವಾಗಿ ಅಭಿನಂದಿಸುತ್ತೇನೆ.

"'ಬರವಣಿಗೆ'ಯಲ್ಲಿ ಲೇಖಕರ ಹಲವು ತೆರನಾದ ಪ್ರತಿಭಾಬೀಜಗಳು ಕಾಣಬರುತ್ತಿವೆ. ಆಳವಾದ ಭಾವನೆಗಳ ಸೂಚನೆಯಿದೆ. ಮುಖ್ಯವಾಗಿ 'ಸಂಯಮ' ಎಂಬ ಸಂಸ್ಕೃತಿಯ ಧರ್ಮ ಚೆನ್ನಾಗಿದೆ. ಅವೆಲ್ಲಾ ಮುಂದಕ್ಕೆ ಚೆನ್ನಾಗಿ ಬೆಳೆದು ಫಲಿಸುವ ಹಾಗಾಗಲೆಂದು ನನ್ನ ಮಂಗಳಾಶಾಸನ. 'ನನ್ನ ಪುಸ್ತಕ ಸಂಗ್ರಹಣ' ನನ್ನನ್ನು ಹೆಚ್ಚಾಗಿ ಸೆಳೆದಿದೆ."

—ಹೀಗೆಂಬುದಾಗಿ ಶ್ರೀಮಾನ್ ರಾಳ್ಲಪಲ್ಲಿ ಅನಂತಕೃಷ್ಣಶರ್ಮ (ವಿಶ್ರಾಂತ ತೆಲುಗು ಪ್ರಾಧ್ಯಾಪಕರು, ಮೈಸೂರು ವಿಶ್ವವಿದ್ಯಾನಿಲಯ) ಅವರು ನಮ್ಮ ಕಾರ್ಯವನ್ನೂ ನಮ್ಮ ಲೇಖಕರನ್ನೂ ಆಶೀರ್ವದಿಸಿದ್ದಾರೆ. ಹೀಗೆಯೇ ಇತರ ಸಾಹಿತ್ಯರಸಿಕರೂ ವಿದ್ಯಾರ್ಥಿ ಹಿತೈಷಿಗಳೂ ಈ ಬರವಣಿಗೆಗಳನ್ನು ಅನುಮೋದನಮಾಡಿ, ಇನ್ನೂ ಉತ್ತಮವಾಗಲು ಬೇಕಾದ ಸಲಹೆಗಳನ್ನು ನೀಡಿರುವುದು '**ಪಚ್ಚೆಯ ತೆನೆ**'ಯ ಮೊದಲಿನಲ್ಲೂ ಕೊನೆಯಲ್ಲೂ ಮುದ್ರಿತವಾಗಿದೆ. ನಮ್ಮ ವಿದ್ಯಾರ್ಥಿಗಳು ಈ ಎಲ್ಲ ಬಲ್ಲವರ ನಿಃಸ್ವಾರ್ಥವಾದ ನುಡಿಗಳಿಂದ ಭರವಸೆ ಹೊಂದಿ, ಬರಹದ ಗುಣವನ್ನು ವೃದ್ಧಿಪಡಿಸಿಕೊಳ್ಳಲಿ ಎಂದು ಹಾರೈಸುತ್ತೇನೆ.

೧೦-೩-೧೯೫೪
ಸೆಂಟ್ರಲ್ ಕಾಲೆಜ್

**ಜಿ. ಪಿ. ರಾಜರತ್ನಂ**
ಕರ್ಣಾಟಕ ಸಂಘದ ಪರವಾಗಿ

# “ಕಾಲೆಜ್ ಬರವಣಿಗೆ”ಯ ವಿಮರ್ಶೆ

## ೧

## ‘ಮಕ್ಕಳ ಮಾತು’ ಎಂಬ ಮೊದಲನೆಯ ಆವರ್ತವನ್ನು ಕುರಿತು

ವಿ. ನಂಜುಂಡಯ್ಯ

ಸೆಂಟ್ರಲ್ ಕಾಲೇಜಿನ ಈ ವರ್ಷದ ವಿದ್ಯಾರ್ಥಿಗಳು ಬರೆದ ಹಲವಾರು ‘ಎಸ್ಸೆ’ಗಳಲ್ಲಿ ಉತ್ತಮವೆನಿಸಿದ ಒಂದು ಹತ್ತು ಈ ಮೊದಲನೆಯ ಆವರ್ತದಲ್ಲಿ ಪ್ರಕಟವಾಗಿವೆ. ಸೆಂಟ್ರಲ್ ಕಾಲೇಜು ವಿಜ್ಞಾನಕ್ಕೆ ಸಂಬಂಧಪಟ್ಟ ಕಾಲೇಜು ಆದರೂ, ಎಸ್ಸೆ ಬರೆಯುವ ಕಾರ್ಯದಲ್ಲಿ ವಿದ್ಯಾರ್ಥಿಗಳ ಶಕ್ತಿ ಎಷ್ಟು ಉತ್ತಮ ಮಟ್ಟದಲ್ಲಿದೆ ಎಂಬುದು ಇದರಿಂದ ಗೋಚರವಾಗುತ್ತದೆ.

ಮೊದಲನೆಯ ಎಸ್ಸೆ ‘ಮಕ್ಕಳ ಮಾತು’ ಮುದ್ದಾದ ಎಸ್ಸೆ. ಬರಹಗಾರರು ವಿಶೇಷ ಚಾಕಚಕ್ಯತೆಯಿಂದ ಕೊನೆಯವರೆಗೂ ವಿಷಯವನ್ನು ಸ್ತಿಮಿತದಲ್ಲಿಟ್ಟುಕೊಂಡು ಮುಂದುವರಿದಿದ್ದಾರೆ. ಮಕ್ಕಳಿಗೆ ಸ್ನಾನಮಾಡಿಸುವಾಗಲೂ, ಅವು ಸಂತೋಷದಿಂದಿರುವಾಗಲೂ, ಅಳುತ್ತಾ ಸಿಟ್ಟಿಗೆದ್ದು ತೊದಲು ನುಡಿಗಳಿಂದ ಬೈಯಲು ಪ್ರಾರಂಭಿಸಿದಾಗಲೂ, ಅವುಗಳ ಮಾತನ್ನು ಕೇಳಲು ನಮ್ಮ ಸಂತೋಷಕ್ಕೆ ಪಾರ ಇಲ್ಲವೆಂಬುದು ನಿಜ.

‘ತರಗತಿಯ ಕಿಟಕಿಯಿಂದಾಚೆ’ ಬರಹವನ್ನು ಇನ್ನಷ್ಟು ಉತ್ತಮವಾಗಿ ಚಿತ್ರಿಸಬಹುದಾಗಿತ್ತು. ಸಂಪಾದಕರು ಸೂಚಿಸಿರುವ ಈ ಎಸ್ಸೆ ಬರಹಕಾರರಿಂದ ಅಷ್ಟಾಗಿ ವಿವರಗೊಂಡಿಲ್ಲ.

‘ನನ್ನ ಪುಸ್ತಕ ಸಂಗ್ರಹಣ’ ಕಥೆಯ ರೂಪದಲ್ಲಿ ಪ್ರಾರಂಭವಾಗಿ, ಓದುಗರ ಕುತೂಹಲವನ್ನು ಕೆರಳಿಸುತ್ತದೆ. ಸಂಗ್ರಹಣಕಾರ್ಯದಲ್ಲಿ ಲೇಖಕರಿಗೆ ಇರುವ ಆಸಕ್ತಿ ಉತ್ತಮವಾಗಿ ವ್ಯಕ್ತಗೊಂಡಿದೆ.

‘ಕಾಂಪೌಂಡ್ ಗೋಡೆ’ಯ ಒಂದು ದಿನದ ಬದುಕನ್ನು ಚಿತ್ರಿಸಿರುವ ರೀತಿ ಬಹಳ ಶ್ಲಾಘನೀಯ. ತಾಳ್ಮೆಯ ತೆಕ್ಕೆಯಲ್ಲಿ ಸಿಕ್ಕಿಕೊಂಡಿರುವ ಆ ಕಾಂಪೌಂಡ್ ಗೋಡೆ, ತನಗೆ ದೊರಕಿದ ಅನುಕೂಲ ಪ್ರತಿಕೂಲಗಳನ್ನು ಎಷ್ಟರ ಮಟ್ಟಿಗೆ ಸಹಿಸಿಕೊಳ್ಳಬಲ್ಲುದು! ಯಾರು ಹೇಗೆ ವರ್ತಿಸಿದರೂ ತನ್ನ

ಸಹನೆಯನ್ನು ಬಿಡುವುದಿಲ್ಲ. ಈ ಚಿತ್ರ ಕಾಲ್ಪನಿಕವಾದರೂ, ಮಾನವರು ಅರಿಯಬೇಕಾದ ವಿಷಯಗಳು ಇದರಲ್ಲಿ ಬಹಳವಿವೆ. 'ಎಮ್ಮೆಗಳಾದರೂ ಸಾವಿರಾರು ಬೋರ್ಡುಗಳನ್ನು ನೋಡಿ ನೋಡಿ ಕಾಲುದಾರಿಯಲ್ಲಿ ನಡೆಯುವುದನ್ನು ಕಲಿತಿವೆಯಲ್ಲ!' ಎಂಬ ವಾಕ್ಯ ಹಾಸ್ಯದೋಪಾದಿಯಲ್ಲಿ ಹರಿದಿದ್ದರೂ, ಓದುಗನಿಗೆ ಚುರುಕು ಮುಟ್ಟಿಸುತ್ತದೆ.

'ಸ್ನೇಹದ ನದಿ'ಯನ್ನು ಚಿತ್ರಿಸಿರುವ ರೀತಿಯಲ್ಲಿ ನಾವೀನ್ಯತೆ ಇದೆ. ಪರಿಶುದ್ಧವಾದ ಸ್ನೇಹ ಸ್ಥಿರವಾದುದು ಎಂಬುದನ್ನು, ಬರಹಗಾರರು ಉತ್ತಮವಾದ ನಿದರ್ಶನಗಳ ಮೂಲಕ ವಿವರಿಸಿದ್ದಾರೆ.

'ಏರೋಪ್ಲೇನು ತಲೆಯ ಮೇಲೆ ಹಾರಿಹೋದಾಗ', ಎಂಬುದು ಒಂದು ಸಾಧಾರಣ ಕೃತಿ. ಸ್ವಲ್ಪ ಕಥೆಯ ರೂಪದಲ್ಲಿ ಓಡಿದೆ. ತಲೆಯ ಮೇಲೆ ಹಾರಿಹೋದಾಗಿನ ಸ್ಥಿತಿಯನ್ನು ಸ್ವಲ್ಪ ಹೆಚ್ಚು ವಿವರವಾಗಿಯೇ ತಿಳಿಸಿದ್ದರೂ, ಓದುಗರ ಮನಸ್ಸಿನಲ್ಲಿ ಅಷ್ಟೇನೂ ಕುತೂಹಲ ಕೆರಳಿಸುವಂತಿಲ್ಲ. ಹಳ್ಳಿಯವರ ಮಾತುಗಳನ್ನು ಅವರ ಭಾಷೆಯ ರೂಪದಲ್ಲಿಯೇ ಉಳಿಸಿರುವುದು ಚೆನ್ನಾಗಿದೆ. ಅಲ್ಲಲ್ಲಿ ಹಾಸ್ಯಗಳನ್ನು ಸೇರಿಸಿ ಹೆಣೆದಿರುವುದೂ ಸಮಂಜಸವಾಗಿದೆ. ಇಷ್ಟು ವಿಷಯಗಳನ್ನು ಬಿಟ್ಟರೆ ಇದು ಒಂದು ಸಾಮಾನ್ಯ ಕೃತಿ.

'ಮದುವೆ ಮನೆಯ ಸಂಗೀತ' ಈ ಸಂಗ್ರಹದಲ್ಲಿ ಅತ್ಯುತ್ತಮವಾದ ರಚನೆ. ಉಳಿದ ಕೃತಿಗಳಿಗಿಂತ ಇದು ಹೆಚ್ಚು ಮನ್ನಣೆ ಪಡೆಯುತ್ತದೆ. ಮದುವೆಯ ಸಂಭ್ರಮಗಳೆಲ್ಲಾ ಮುಗಿದು ಮುಕ್ತಾಯಗೊಳ್ಳುವ ವರೆಗೂ ಅಲ್ಲಿಯ ವಿವಿಧ ಜನಗಳ ಬಾಯಿಗಳಿಂದ ಹೊರಡುವ ಮಾತಿನ ತರಂಗಗಳನ್ನೂ ಇದರಲ್ಲಿ ಸಾಕಷ್ಟು ಸೇರಿಸಿ ವಿವರಿಸಿದ್ದಿದ್ದರೆ ಇನ್ನೂ ಉತ್ತಮವಾಗುತ್ತಿತ್ತು. ವಧೂವರರ ಕಡೆಯವರ, ಮಧ್ಯಸ್ಥಗಾರರ, ಪುರೋಹಿತರ ಮತ್ತು ಆಹ್ವಾನಿತರಾಗಿ ಆಗಮಿಸಿರುವ ಸ್ತ್ರೀಪುರುಷರ ಸಮೂಹದ ಚಿತ್ರಗಳು ಖಚಿತವಾಗಿ ಚಿತ್ರಿಸಲ್ಪಟ್ಟಿವೆ. ಒಟ್ಟಿನಲ್ಲಿ ಈ ಕೃತಿ ಪುಸ್ತಕದ ಉತ್ತಮ ಸಜೀವ ಚಿತ್ರ.

'ಕಾಲೇಜು ದಾರಿಯ ದನಗಳು': ಮಾನವರಾಗಿ ಜನ್ಮ ತಾಳಿದ್ದರೂ, ಬಹುಮಂದಿ ದನಗಳೋಪಾದಿಯಲ್ಲಿಯೇ ವರ್ತಿಸುತ್ತಾರೆ. ತಮ್ಮ ದೃಷ್ಟಿಯೊಂದನ್ನೇ ಮಹತ್ತರವಾಗಿ ಕಂಡುಕೊಂಡು, ಬೇರೆಯವರಿಗೆ ಪ್ರತಿಕೂಲವಾಗಿ ಕಂಡುಬರುವ ಅನೇಕ ವ್ಯಕ್ತಿಗಳನ್ನು ಕಾಲೇಜು ದಾರಿಗಳಲ್ಲಿ ನಾವು ನಿತ್ಯವೂ

ಕಾಣಬಹುದು. ಇದೊಂದನ್ನೇ ಮುಖ್ಯ ಗುರಿಯಾಗಿಟ್ಟುಕೊಂಡು ಬರಹಗಾರರು ಎಸ್ಸೆ ರಚಿಸಿದ್ದಿದ್ದರೆ, ರಚನೆ ಇನ್ನೂ ಉತ್ತಮವಾಗುತ್ತಿತ್ತು. ಆದರೂ ಎಷ್ಟೋ ವೇಳೆ ದನಗಳಲ್ಲಿ ಕಂಡುಬರುವ ಸಹನೆ, ದಯೆ, ಕರುಣೆ, ಮುಂತಾದವು ಅನೇಕ ಉತ್ತಮರೆನಿಸಿಕೊಂಡಿರುವವರಲ್ಲಿಯೂ ಕಂಡುಬರುವುದಿಲ್ಲವೆಂಬುದು ಈ ಬರಹದಿಂದ ಗೋಚರಿಸದೆ ಇರಲಾರದು.

'ಇದು ಕಿವಿಗೆ ಇಂಪು': ಯಾವುದು ಯಾವ ಸಂದರ್ಭದಲ್ಲಿ ಯಾರ ಕಿವಿಗೆ ಇಂಪಾಗಿರುತ್ತದೆ? ಬರಹಗಾರರೇ ತಿಳಿಸಿರುವಂತೆ ಉತ್ತರ ಸಿಗುವುದು ಬಹಳ ಕಷ್ಟ. ಆದರೂ ಅನೇಕ ನಿದರ್ಶನಗಳಿಂದ ಎಸ್ಸೆ ಸುಂದರವಾಗಿದೆ. ತುಂಬ ಸಣ್ಣದಾದರೂ—ಆದ್ದರಿಂದಲೇ—ಕಿವಿಗೆ ಇಂಪಾಗಿದೆ.

'ಟೋಪಿ': ನಾನಾ ಬಗೆಯ ಟೋಪಿಗಳಲ್ಲಿ ಒಂದನ್ನು ಪ್ರತಿಯೊಬ್ಬನೂ ಯಾವುದಾದರೂ ಒಂದು ಸಂದರ್ಭದಲ್ಲಿ ಹಾಕಿಯೇ ಇರುತ್ತಾನೆ! ಅದನ್ನು ಹಾಕಿಕೊಳ್ಳುವುದರಿಂದ ಲಭಿಸಬಹುದಾದ ಉಪಯೋಗಗಳನ್ನು ಬರಹಗಾರರು ಉತ್ತಮವಾಗಿ ವಿವರಿಸಿದ್ದಾರೆ.

ಮೇಲಿನ ಹತ್ತು ಎಸ್ಸೆಗಳಲ್ಲದೆ ೧೯೫೩ ರ ಪ್ರಕಟಣೆಯಾದ 'ಬಾಲ ಸರಸ್ವತಿ'ಯನ್ನು ಕುರಿತು ಒಬ್ಬ ವಿದ್ಯಾರ್ಥಿ ಬರೆದಿರುವ ಸಹೃದಯ ವಿಮರ್ಶೆ, ಕರ್ಣಾಟಕ ಸಂಘದ ಸಂಪ್ರದಾಯಗಳನ್ನೊಳಗೊಂಡ ಶ್ರೀ ಡಿ. ವಿ. ಜಿ. ಅವರ ಮುನ್ನುಡಿ, ಅಲ್ಲಲ್ಲಿ ಕಾಣುವ ಕವನಗಳ ತುಣುಕುಗಳು, ಅಲ್ಲದೆ ಶ್ರೀಮಾನ್ ಎ. ಆರ್. ಕೃಷ್ಣಶಾಸ್ತ್ರಿಗಳು 'ಬಾಲ ಸರಸ್ವತಿ'ಯ ಬಗ್ಗೆ ಕಳುಹಿಸಿರುವ 'ಅಭಿನಂದನ'—ಇವುಗಳಿಂದ ಗ್ರಂಥದ ಉಪಯುಕ್ತತೆ ಹೆಚ್ಚಿದೆ. ಮುದ್ರಾರಾಕ್ಷಸನ ಹಾವಳಿಯಿಂದ ದೂರವಾಗಿದ್ದು ಪುಸ್ತಕ ಅಂದವಾಗಿದೆ.

"ಮಯಿ ಸರ್ವಮಿದಂ ಪ್ರೋತಂ ಸೂತ್ರೇ ಮಣಿಗಣಾ ಇವ" ಎಂದು ಗೀತೆಯಲ್ಲಿ ಹೇಳಿರುವಂತೆ, ವಿದ್ಯಾರ್ಥಿಗಳನ್ನು ಒಂದೆಡೆ ಸೇರಿಸಿ, ಅವರಲ್ಲಿರುವ ಅರೆಕೊರೆ ಬೆಳಕುಗಳನ್ನು ಒಟ್ಟುಗೂಡಿಸಿ, ಪ್ರಸಾರ ಮಾಡುತ್ತಿರುವ ನಮ್ಮ ಸೆಂಟ್ರಲ್ ಕಾಲೇಜ್ ಕರ್ಣಾಟಕ ಸಂಘಕ್ಕೆ ನಾವು ಚಿರಋಣಿಗಳು.

೨

## 'ಪಚ್ಚೆಯ ತೆನೆ' ಎಂಬ ಎರಡನೆಯ ಆವರ್ತವನ್ನು ಕುರಿತು

ಬಿ. ಸಿ. ಶೇಖರ್

'ಕಾಲೇಜ್ ಬರವಣಿಗೆ'ಯ ಎರಡನೇ ಆವರ್ತ ಮೊದಲನೆಯದಕ್ಕಿಂತ ಚೆನ್ನಾಗಿದೆ. ವಿದ್ಯಾರ್ಥಿಗಳ ಮನಸ್ಸುಗಳು ಯಾವ ಯಾವ angleನಲ್ಲಿ ಇರುತ್ತವೆ ಎಂಬುದನ್ನು ತೋರಿಸಿಕೊಡುತ್ತವೆ, ಇದರಲ್ಲಿ ಇರುವ ಹತ್ತು ಬರಹಗಳು.

ಸಸ್ಯಶಾಸ್ತ್ರಕ್ಕೆ ಸಂಬಂಧಪಟ್ಟ ಮೂರು ಬರಹಗಳಲ್ಲಿ 'ಸಸ್ಯ ಶಾಸ್ತ್ರ ಪ್ರದರ್ಶನ' ಬಹಳ ಚೆನ್ನಾಗಿದೆ. ಸಾಮಾನ್ಯವಾಗಿ ಶಾಸ್ತ್ರ ತಿಳಿದಿರುವವರು ತಿಳಿಯದವರಿಗೆ, ಭಾಷಣ ಮೂಲಕವಾಗಲಿ ಅಥವಾ ಸಾಮಾನ್ಯತರದ ಪ್ರಬಂಧದ ಮೂಲಕವಾಗಲಿ ತಿಳಿಯಪಡಿಸಿದರೆ ಅರ್ಥವಾಗುವುದಿಲ್ಲ. ಅದನ್ನೇ ಸಂಭಾಷಣೆಯ ಮೂಲಕ, ಓದುವವರಿಗೆ ಬರುವ ಶಂಕೆ ಪ್ರಶ್ನೆಗಳನ್ನು ಸಂಭಾಷಣೆಯಲ್ಲಿ ಸೃಷ್ಟಿಸಿ, ಸಮಾಧಾನಗಳನ್ನು ಕೊಟ್ಟರೆ, ಓದುಗನು ಚೆನ್ನಾಗಿ ಅರ್ಥಮಾಡಿಕೊಳ್ಳುತ್ತಾನೆ. ಎಂದಿಗೂ ಮರೆಯಲಾರ. ಉದಾಹರಣೆಗೆ: ಇದ್ದಿಲಿನಲ್ಲಿರುವುದು Carbon, ವಜ್ರದಲ್ಲಿರುವುದೂ Carbon ಎಂದು ಹೇಳಿಮುಗಿಸುವುದಕ್ಕಿಂತ, ಇದ್ದಿಲಿಗೂ ವಜ್ರಕ್ಕೂ ರಸವತ್ತಾದ ಸಂಭಾಷಣೆ ಉಂಟುಮಾಡಿ, ವಜ್ರ ಗರ್ವಪಡುತ್ತಿದ್ದ ಹಾಗೂ, ಇದ್ದಿಲು 'ನನ್ನನ್ನೂ 500 ಡಿಗ್ರಿ ಸೆಂಟಿಗ್ರೇಡ್ ಹತ್ತಿರ ಕಬ್ಬಿಣ ಜೊತೆಯಲ್ಲಿ ಕಾಯಿಸಿದರೆ ನಾನೂ ವಜ್ರ ಆಗ್ತೀನಿ' ಎಂದ ಹಾಗೂ ರಸವತ್ತಾದ ಸಂಭಾಷಣೆ ಉಂಟುಮಾಡಿದರೆ ಬಹಳ ಚೆನ್ನಾಗಿರುತ್ತೆ. ಲೇಖಕರು ಈ "ಸಸ್ಯ ಶಾಸ್ತ್ರ ಪ್ರದರ್ಶನ"ದಲ್ಲಿ ತಮ್ಮ ಅರ್ಹತೆಯನ್ನು ತೋರಿಸಿಕೊಂಡಿದಾರೆ. ಮಿಕ್ಕ ಎರಡು ಎಸ್ಸೆ ಸಾಧಾರಣವಾಗಿವೆ.

'ಕೆಟ್ಟ ಕನಸು,' 'ಹಳೆಯ ಚಪ್ಪಲಿ ಹೊಲಿಯುವವನು' ಒಂದು ಜೊತೆಗೆ ಸೇರಿದವು. ಇವು ಬಹು ಮಟ್ಟಿಗೆ ಕತೆಗಳೆಂದೇ ಹೇಳಬಹುದು. 'ಕೆಟ್ಟ ಕನಸಿ'ನಲ್ಲಿರುವ ವೈಶಿಷ್ಟ್ಯ 'ಕವಳ ತಾಯಿ' ಎಂಬ ಶೀರ್ಷಿಕೆಯನ್ನು ಬಳಸಿಕೊಂಡಿರುವ ಬಗೆ. 'ಹಳೆಯ ಚಪ್ಪಲಿ ಹೊಲಿಯುವವನು' ಕತೆ ಒಂದೇ ಅಲ್ಲ; ಒಂದು ಸಾಮಾನ್ಯ ಅಧಮ ತರಗತಿ ಮನುಷ್ಯನ ಜೀವನಚಿತ್ರವನ್ನು ಪ್ರತಿಬಿಂಬಿಸುತ್ತದೆ. 'Foot path'ಅನ್ನೇ ಮನೆಯನ್ನಾಗಿ ಮಾಡಿಕೊಂಡಿರುವವರನ್ನು ದಿವಸ ನೋಡುತ್ತೇವೆ. ಅವರ ಜೀವನ ಕಣ್ಣಿಗೆ ಕಟ್ಟಿದ ಹಾಗೆ

ತೋರಿಸುತ್ತದೆ ಈ ಎಸ್ಸೆ. ಅಷ್ಟೇ ಅಲ್ಲ, ಹೆಣ್ಣುಮಕ್ಕಳೆಂದರೆ ಒಳ್ಳೆಯ ಅಭಿಪ್ರಾಯ ಉಂಟುಮಾಡುತ್ತದೆ. ಸಾಮಾನ್ಯರು ಮಾತಾಡುವ ಭಾಷೆಯನ್ನು ಚಪ್ಪಲಿ ಹೊಲಿಯುವವನ ಬಾಯಿಂದ ಹೇಳಿಸಿರುವ ಶೈಲಿ ಈ ಕತೆಗೆ ಜೀವ ಕೊಟ್ಟಿದೆ.

'ನಾನು ತಿಂದಿರುವ ಹಣ್ಣುಗಳು': ಹಳ್ಳಿಯ ಜನರು ಎಂತೆಂತಹ ಕಾಡು ಹಣ್ಣುಗಳನ್ನು ತಿನ್ನುತ್ತಾರೆ, ಅವುಗಳಿಂದ ಅವರಿಗೆ ಉಂಟಾಗುವ ತೃಪ್ತಿ ಎಂಥದು ಎಂಬುದನ್ನು ಈ ಎಸ್ಸೆ ಸಾರುತ್ತದೆ. ನಾನೂ ಹಳ್ಳಿಯಲ್ಲಿ ಹುಟ್ಟಿದವನೇ, ಎಲ್ಲ ತರಹ ಹಣ್ಣುಗಳನ್ನು ತಿಂದಿದ್ದೇನೆ. ಆದರೆ ತೀರ ಬರೆಯಬೇಕೆಂದು ಕುಳಿತರೆ ನೆನಪಿಗೇ ಬರುವುದಿಲ್ಲ. ಒಂದು ವೇಳೆ ಬಂದರೂ ಅವುಗಳ ಹೆಸರು ಜ್ಞಾಪಕವಾಗುವುದಿಲ್ಲ. ಈ ಪ್ರಬಂಧ ಓದಿದಾಗ ನನ್ನ ಚಿಕ್ಕಂದಿನ ಜೀವನದ ಚಿತ್ರ ನೆನಪಿಗೆ ಬಂದವು. 'ನಾನು ಕಂಡಿರುವ ಕಣ್ಣುಗಳು' ಅದೇ ತರಹದ್ದೆ. ನಾವು ದಿವಸ ನೋಡುವ ಬಗೆಬಗೆಯ ಕಣ್ಣುಗಳನ್ನು ಬಣ್ಣಿಸಿದ್ದಾರೆ, ಲೇಖಕರು. ಕಣ್ಣುಗಳಲ್ಲಿ ಕರುಣೆ, ಭಯ, ಕೋಪ, ಅಸಹ್ಯ ಮುಂತಾದ ರಸಗಳನ್ನು ಕಾಣಬಹುದು. ಅಂತಹ ರಸಗಳನ್ನು ಇಲ್ಲಿ ಚಿತ್ರಿಸಿದ್ದಾರೆ.

'ಪೆನ್ಸಿಲಿನ ಆಶೆ,' 'ಮೂಗಿನ ಮಹತ್ತ್ವ' ಒಳ್ಳೆಯ ಪ್ರಬಂಧಗಳು. ಏನು ಬರೆಯಬೇಕಪ್ಪ? ಎಂಬ ಶಂಕೆ ಉಂಟುಮಾಡುವ topics ತೆಗೆದುಕೊಂಡು ಬೆಳಸಿಕೊಂಡುಬಂದಿರುವ ಬಗೆಯನ್ನು ಇಲ್ಲಿ ನೋಡಿ ಪ್ರಶಂಸಿಸಬಹುದು.

"ಕನ್ನಡಿಯ ಮುಂದೆ" ಎಂಬುದು ಈ ಸಂಗ್ರಹದಲ್ಲಿ ಉತ್ತಮವಾದ ಪ್ರಬಂಧ. ನಿತ್ಯಜೀವನದಲ್ಲಿ ಎಲ್ಲ ದರ್ಜೆಯ ಮನುಷ್ಯರೂ ಎಷ್ಟೊಂದು ಕಾಲವನ್ನು ಕನ್ನಡಿಯ ಮುಂದೆ ವೃಥಾ ಮಾಡುತ್ತಾರೆ, ಕನ್ನಡಿಯ ಮುಂದಿದ್ದಾಗ ಯಾವ ಬಗೆಯ ಅಭಿಪ್ರಾಯಗಳು ಬರುತ್ತವೆ ಎಂಬುದನ್ನು ಇಲ್ಲಿ ಚೆನ್ನಾಗಿ ಚಿತ್ರಿಸಿದ್ದಾರೆ.

ಇಷ್ಟು ಉತ್ಸಾಹವಂತರಾಗಿ ಇಷ್ಟೊಂದು ಸೊಗಸಾದ ಎಸ್ಸೆಗಳನ್ನು ರಚಿಸುತ್ತಿರುವ ವಿದ್ಯಾರ್ಥಿಗಳಿಗೆ ಪ್ರೋತ್ಸಾಹ ಕೊಟ್ಟು, ಅವರಲ್ಲಿ ಅಡಗಿರುವ ಲೇಖನಕಲೆಯನ್ನು ಬಯಲಿಗೆಳೆದು, ಬರೆಯುವವರಿಗೂ ಓದುವವರಿಗೂ ಸಂತೋಷವನ್ನು ಕೊಡುತ್ತಿರುವ ಸೆಂಟ್ರಲ್ ಕಾಲೇಜ್ ಕರ್ಣಾಟಕ ಸಂಘಕ್ಕೆ ನಮ್ಮ ಹೃತ್ಪೂರ್ವಕವಾದ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

# ನಮ್ಮ ಅಗಸ ಓಬ

"ಕಾಲೇಜ್ ಬರೆವಣಿಗೆ"ಯ ಮೊದಲನೆಯ ಆವರ್ತವನ್ನು ನಾನು ಊರಿಗೆ ತರುವ ಮೊದಲೇ, ಅದರಲ್ಲಿ "ನಮ್ಮ ಅಗಸ" ಎನ್ನೆಯ ವಿಷಯವನ್ನು ಮನಸ್ಸಿಗೆ ತರುವ ಮೊದಲೇ, ನಮ್ಮ ಅಗಸ ಹಾಸಿಗೆ ಹಿಡಿದಿದ್ದ. ಸ್ನಾನಕ್ಕೆ ಬಚ್ಚಲಮನೆಗೆ ಹೋಗುವುದಕ್ಕೆ ಮುಂಚೆಯೇ, ನಮ್ಮ ತಾಯಿ "ಓಬನಿಗೆ ಪ್ಲೇಗು ತಗಲಿದೆ. ಹಾಸಿಗೆ ಹಿಡಿದಿದ್ದಾನೆ. ಒಗೆಯುವುದಕ್ಕೆ ಅವನ ಮನೆಯ ವರಿಗೂ ಬರುವುದಕ್ಕಾಗುವುದಿಲ್ಲವಂತೆ. ನಿನ್ನ ಬಟ್ಟೆಗಳನ್ನು ನೀನೇ ಒಗೆದು ಕೊಳ್ಳಬೇಕು" ಎಂದರು. ನನಗೆ ದುಃಖವಾಯಿತು. ನನ್ನ ಬಟ್ಟೆಗಳನ್ನು ನಾನೇ ಒಗೆದುಕೊಳ್ಳಬೇಕಲ್ಲಾ ಎಂದಲ್ಲ, ಪಾಪ, ಎಂದೂ ಕಾಯಿಲೆಗೆ ತುತ್ತಾಗದ ಓಬ ಕಾಲುಚಾಚಿದನಲ್ಲಾ ಎಂದು.

ನಮ್ಮೂರಿನಲ್ಲಿ ಮೂರು ನಾಲ್ಕು ಜನ ಅಮರರು. ಅವರಲ್ಲಿ ಬೆಸ್ತರ ಕರಿಯ, ಮಡಿವಾಳ ಓಬ, ಹೊಲೆಯ ಹೊನ್ನಲಗ—ಇವರು ಮುಖ್ಯರು. ಇವರಲ್ಲಿ ಈಗ ಹೊನ್ನಲಗ ತೀರಿಕೊಂಡಿದ್ದಾನೆ. ಓಬನೂ ಅವನ ದಾರಿಯನ್ನೇ ಕೆಲವು ದಿನಗಳ ಹಿಂದೆ ಹಿಡಿದ. ಬೆಸ್ತರ ಕರಿಯ ಮಾತ್ರ ಇನ್ನೂ ಇದ್ದಾನೆ. ಓಬ, ಹೊನ್ನಲಗ ಇವರನ್ನು ನಮ್ಮೂರಿನವರು ಎಂದೆಂದಿಗೂ ಮರೆಯುವ ಹಾಗಿಲ್ಲ. ಅವರು ನಮ್ಮೂರಿನವರ ಮೇಲೆ, ನಮ್ಮೂರಿನ ಮೇಲೆ ಅಷ್ಟು ದೊಡ್ಡ ಪ್ರಭಾವವನ್ನು ಬೀರಿಹೋಗಿದ್ದಾರೆ. ಹೊನ್ನಲಗನ ಹೆಸರಿನಲ್ಲಿ ಈಗಲೂ ನಮ್ಮ ಊರಿನ ರಥೋತ್ಸವದ ಕಾಲದಲ್ಲಿ ಒಂದು ಪೂಜೆ ನಡೆಯುತ್ತದೆ. ಮಡಿವಾಳ ಓಬನೇ ನಡಸುತ್ತಿದ್ದ ಉತ್ಸವವನ್ನು ವರ್ಷ ಬಿಡದೆ ನಡಸಿಕೊಂಡು ಬರಲು ಊರಿನವರು ನಿಶ್ಚಯಿಸಿದ್ದಾರೆ.

ಓಬ ನಮ್ಮೂರಿನ ಮಡಿವಾಳ—ನಮ್ಮೂರಿನವರೆಲ್ಲರ ಮಡಿವಾಳ. ನಮ್ಮೂರು ಹುಟ್ಟುವಾಗಲೇ ತನ್ನ ಹಿಂದಿನವರು ಇಲ್ಲಿ ಒಕ್ಕಲುಹಾಕಿ, ಊರ ಮಡಿವಾಳರಾದರು ಎಂದು ಹೆಮ್ಮೆಯಿಂದ ಓಬ ಹೇಳಿಕೊಳ್ಳುತ್ತಿದ್ದ. ಇದು ನಿಜವಿದ್ದರೂ ಇರಬಹುದು. ನಮಗೆ ಸಿಕ್ಕಿರುವ ಊರೊಟ್ಟಿನ ಬಹಳ ಹಳೆಯ ದಾದ ಲೆಕ್ಕದ ಪುಸ್ತಕವೊಂದರಲ್ಲಿ 'ಮಡಿವಾಳ ಸಿದ್ದನಿಗೆ ವರ್ಷಾಶನ ಹತ್ತು ರೂಪಾಯಿಗಳು' ಎಂದು ಬರೆದಿದೆ. ಈ ಮಡಿವಾಳ ಸಿದ್ದ ಓಬನ ಮುತ್ತಜ್ಜ

ನಂತೆ. ಒಟ್ಟಿನಲ್ಲಿ ನಾಲ್ಕಾರು ತಲೆಮಾರಿನಿಂದ ಇವನ ಮನೆಯವರೇ ಮಡಿವಾಳ ರಾಗಿದ್ದರೆಂಬುದು ನಿಸ್ಸಂಶಯ. ಈಗ ಓಬನ ಮನೆ ಬಹಳ ದೊಡ್ಡದಾಗಿ ಬಿಟ್ಟಿದೆ. ಅವನ ತಮ್ಮಂದಿರು, ತಮ್ಮಂದಿರ ಮಕ್ಕಳು, ಮರಿಮಕ್ಕಳು—ಹೀಗೆ ಕವಲೊಡೆದು ಕವಲೊಡೆದು ಅವನ ವಂಶವೃಕ್ಷ ದೊಡ್ಡದಾಗಿ ಹರಡಿಕೊಂಡಿದೆ. ಊರು ದೊಡ್ಡದಾಗುತ್ತಿದ್ದ ಹಾಗೆಲ್ಲಾ ಇವನ ಮನೆಯೂ ದೊಡ್ಡದಾಗುತ್ತಿದೆ. ಆದರೂ ಅದು ವಿಪರೀತವಾಗಿ ಬೆಳೆದಿರುವುದರಿಂದ, ಓಬ ಕೆಲವರನ್ನು ಹಳ್ಳಿಗಳ ಕಡೆ ಕೆಲಸಮಾಡಿ ಜೀವಿಸುವುದಕ್ಕೆ ಕಳುಹಿಸಿದ್ದಾನೆ. ಇಷ್ಟಾದರೂ ಈಗ ಇವನ ಮನೆಯಲ್ಲಿ ಇಪ್ಪತ್ತೈದು ಜನರಿಗೆ ಕಡಮೆಯಿಲ್ಲ. ಈತ ಇಲ್ಲಿಯವರೆಗೂ ತನ್ನ "ಮನೆಗೆ ಒಂದು ಮುದಿಗೊಂಡು" ಆಗಿದ್ದ.

ನಾಯುವಾಗ ಓಬನಿಗೆ ಎಂಬತ್ತೈದು ವರ್ಷಕ್ಕಿಂತ ಖಂಡಿತ ಹೆಚ್ಚಾಗಿಯೇ ಇರಬೇಕು. ಈಗ ಎಂಬತ್ತುವರ್ಷದವರಾದ ಮುತ್ತಣ್ಣನವರು ಐದು ವರ್ಷದವರಾಗಿದ್ದಾಗ, ಇವನಿಗೆ ಆಗಲೇ ಮದುವೆಯಾಗಿತ್ತಂತೆ. ಇದು ಮುತ್ತಣ್ಣನವರಿಗೆ ಚೆನ್ನಾಗಿ ಜ್ಞಾಪಕ. ಅಂದರೆ ಈತ ನಮ್ಮ ಅಜ್ಜನ ಕಾಲ ದಿಂದಲೂ ಇದ್ದಾನೆ.

ಈತ ಬದುಕಿದ್ದಾಗ ಒಳ್ಳೆಯ ಕಟ್ಟುಮಸ್ತಾದ ಆಳಾಗಿದ್ದ. ಹತ್ತಾರು ಜನರನ್ನು ಒಂದೇ ಸಲಕ್ಕೆ ಮಟ್ಟಮಾಡುವ ಶಕ್ತಿ ಇವನಲ್ಲಿ ಇತ್ತು. ಇವನ ಈ 'ಹರ್ಕ್ಯುಲಿಯನ್' ಶಕ್ತಿಗೆ ನೂರಾರು ನಿದರ್ಶನಗಳನ್ನು ಇವನಿಂದಲೇ ಅನೇಕ ಸಾರಿ ಕೇಳಿದ್ದೇವೆ. ಒಂದು ಸಲ ಈತ ಊರಬಾಗಿಲ ಶಾಮಣ್ಣನವರ ಮನೆಗೆ ಬಟ್ಟೆಯನ್ನು ಕೇಳಲು ಹೊರಟನಂತೆ. ಶಾಮಣ್ಣನವರ ಮನೆಯ ಬಾಗಿಲ ಮುಂದೆ ಅನೇಕ ಜನ ಒಟ್ಟಿಗೆ ನೆರೆದಿದ್ದರಂತೆ. ಬಾಗಿಲನ್ನು ಧಡ ಧಡ ಎಂದು ಇಡಿಯುತ್ತಿದ್ದರು. ಒಬ್ಬರೂ ಊರಿನವರು ಅಲ್ಲಿ ಕಾಣಲಿಲ್ಲ. 'ಪುಳಿಚಾರು' ಗಳು ಎಲ್ಲ ಬಾಗಿಲುಗಳನ್ನು ಹಾಕಿಕೊಂಡು ತಮ್ಮ ತಮ್ಮ ಮನೆಗಳ ಒಳಗೆ ಸೇರಿಕೊಂಡುಬಿಟ್ಟಿದ್ದರು. ಒಂದು ನಿಮಿಷ ದೂರದಲ್ಲಿ ನಿಂತುಕೊಂಡು ಓಬ ನೋಡಿದ. ಸೇರಿದ್ದ ಜನಗಳಲ್ಲಿ ಒಬ್ಬರಿಗೂ ತಲೆಯಿಲ್ಲವೆಂಬುದನ್ನು ತಿಳಿದು ಕೊಂಡ. ಏಕೆಂದರೆ ಯಾರೂ ಹೆಂಚನ್ನು ತೆಗೆದು ಒಳಗೆ ಇಳಿಯುವ ಸಾಹಸಕ್ಕೆ ಕೈಹಾಕಿರಲಿಲ್ಲ. ಪಕ್ಕದ ಬೇಲಿಯಲ್ಲಿ ಬೆಳೆದಿದ್ದ ಕಳ್ಳಿಯ ಗಿಡದಿಂದ ಒಂದು ಕಳ್ಳಿದೊಣ್ಣೆಯನ್ನು ಮಾಡಿಕೊಂಡ. ಎಲ್ಲರೂ ಬಾಗಿಲು ಒಡೆಯುವ ಕಾರ್ಯ

ದಲ್ಲಿ ಮಗ್ನರಾಗಿದ್ದರು. ಓಡಿಹೋಗಿ, ಹಿಂದುಗಡೆಯಿಂದ ಪ್ರತಿಯೊಬ್ಬನ ತಲೆಯ ಮೇಲೂ ಒಂದೊಂದು ಏಟು ಕೊಡುತ್ತಾ ಬಂದ. ಇದ್ದ ಹತ್ತು ಹದಿನೈದು ಜನರೂ ಒಂದೊಂದು ಏಟಿಗೇ ಮಲಗಿದರು. "ದಮ್ಮಯ್ಯ, ಇನ್ನು ಹೊಡೆಯಬೇಡ. ನಾವೇನೂ ತಪ್ಪುಮಾಡಿಲ್ಲ. ನಮ್ಮೂರಿನ ಎಮ್ಮೆಯೊಂದನ್ನು ಈ 'ಪುಳಿಚಾರು' ಕದ್ದು ಮಾರಿಬಿಟ್ಟಿದ್ದಾನೆ. ಅದಕ್ಕೋಸ್ಕರ ಅವನನ್ನು ಹಿಡಿದು ಪೋಲೀಸಿಗೆ ಕೊಡೋಣ ಎಂದು ಬಂದೆವು" ಎಂದರು. ಓಬನಿಗೆ ಶಾಮಣ್ಣನವರ ಮೇಲೆ ಕೋಪ ಬಂತು. ಆದರೂ ಅದನ್ನು ಅಡಗಿಸಿಕೊಂಡು ಅವರಿಂದ ಉಪಾಯವಾಗಿ ಬಾಗಿಲನ್ನು ತೆಗೆಸಿದ. ಶಾಮಣ್ಣನವರು ಮನೆಯ ಹೊರಗೆ ಬಂದೊಡನೆ, ಅವರನ್ನು ಎಲ್ಲರ ಮುಂದೆ ಛೀಮಾರಿ ಮಾಡಿ, ಎಮ್ಮೆಯ ಬೆಲೆ ಇಪ್ಪತ್ತೈದು ರೂಪಾಯಿಗಳನ್ನು ಅವರಿಂದ ಕಕ್ಕಿಸಿದ.

ಈಗ ಐದು ವರ್ಷಗಳ ಹಿಂದೆ ಮೃತರಾದ ಸುಬ್ಬಣ್ಣನವರು ಇವನ ವಿಷಯವಾಗಿ—

"ಅಜೋ ನಿತ್ಯಃ ಶಾಶ್ವತೋಽಯಂ ಪುರಾಣೋ
ನ ಹನ್ಯತೇ ಹನ್ಯಮಾನೇ ಶರೀರೇ"

ಎಂದು ಹೇಳುತ್ತಿದ್ದುದು ನನಗೆ ಚೆನ್ನಾಗಿ ನೆನಪಿದೆ. ಅವರು ಇದಕ್ಕೆ ಈರೀತಿ ಅರ್ಥಮಾಡಿ ಹೇಳುತ್ತಿದ್ದರು: "ನಾನೂ ನನ್ನ ತಂದೆಯೂ ಇವನ ಹುಟ್ಟನ್ನು ಕಾಣೆವು, ಆದ್ದರಿಂದ ಇವನು 'ಅಜ.' ನಾನೂ ನಮ್ಮ ತಂದೆಯೂ ಇವನ ಜೀವಮಾನದಲ್ಲಿಯೇ ಜೀವ ಮುಗಿಸುವೆವಾದ್ದರಿಂದ ಈತ 'ನಿತ್ಯ.' ನಮ್ಮತಂದೆಗಿಂತಲೂ ಮುದುಕನಾದ ಓಬ ನಮಗಿಂತ ಕಟ್ಟುಮಸ್ತಾದ ಆಳು; ಆದ್ದರಿಂದ ಇನ್ನೂ ಅನೇಕ ತಲೆಮಾರುಗಳವರೆಗೆ ಈತ 'ಶಾಶ್ವತ.' ಇನ್ನು ಎರಡು ಮೂರು ತಲೆಮಾರುಗಳಲ್ಲಿ ಈತ 'ಪುರಾಣ'ನಾಗುತ್ತಾನೆ. ಎಷ್ಟೇ ಶರೀರಗಳು ನಮ್ಮೂರಿನಲ್ಲಿ ಬಿದ್ದುಹೋದರೂ ಈತ ಮಾತ್ರ ಸಾಯುವುದಿಲ್ಲವಾದ್ದರಿಂದ 'ನ ಹನ್ಯತೆ ಹನ್ಯಮಾನೇ ಶರೀರೇ' ಎಂಬುದು ಅವರ ವ್ಯಾಖ್ಯಾನ. ಈಗ ಅದು ಸುಳ್ಳಾಗಿ ಹೋಗಿದ್ದರೂ, ಇವನ ಶರೀರ ಸತ್ತರೂ ಇವನ ಹೆಸರು ಅಮರ.

ಮನೆಯ ತುಂಬ ಕೆಲಸಮಾಡುವವರಿದ್ದರೂ, ಓಬ ತನ್ನ ಕಸುಬನ್ನು ತನ್ನ ಜೀವಮಾನದ ಕಡೆಯವರೆಗೂ ಬಿಡಲಿಲ್ಲ. ಊರಿನಲ್ಲಿ ಐದು ಮನೆಗಳ ಬಟ್ಟೆಗಳನ್ನು ಒಗೆಯುತ್ತಿದ್ದ. ಉಳಿದ ಮನೆಯವರ ಬಟ್ಟೆಗಳನ್ನು ಇವನು

ಮನೆಯ ಇತರರು ಒಗೆಯುತ್ತಿದ್ದರು. ನಮ್ಮ ಮನೆಯ ಬಟ್ಟೆಗಳನ್ನು ಎಪ್ಪತ್ತು ವರ್ಷಗಳಿಂದಲೂ ಇವನೇ ಒಗೆದುಕೊಂಡು ಬರುತ್ತಿದ್ದ.

ಸೋಪಿಲ್ಲದೆ ಬಟ್ಟೆಗಳನ್ನು ಒಗೆಯುವುದಕ್ಕೇ ಆಗುವುದಿಲ್ಲ ಎಂದು ತಿಳಿದಿರುವವರು ಓಬನನ್ನು ಕಂಡಿದ್ದರೆ, ಆಗ ತಮ್ಮ ಆ ಭಾವನೆಯನ್ನು ಹಿಂದಕ್ಕೆ ತೆಗೆದುಕೊಳ್ಳುತ್ತಿದ್ದರು. ತನ್ನ ಕಲೆಯಲ್ಲಿ ಈತ ಚೆನ್ನಾಗಿ ನುರಿತವ. ಯಾವ ಯಾವ ಬಟ್ಟೆಗಳನ್ನು ಹೇಗೆ ಹೇಗೆ ಒಗೆಯಬೇಕು ಎಂಬುದನ್ನು ಚೆನ್ನಾಗಿ ಅರಿತಿದ್ದ. ಸೋಪು ಎಂದರೆ ಇವನಿಗೆ ಒಂದು ವಿಧವಾದ ದ್ವೇಷ. ಈತನ ಅಭಿಪ್ರಾಯದಲ್ಲಿ ಸೋಪು ನಮ್ಮವರಲ್ಲಿದ್ದ ಒಗೆಯುವ ಕಲೆಯನ್ನೇ ಹಾಳುಮಾಡಿತು. ಯಾವ ರೀತಿಯಲ್ಲಿ ನೆಯ್ಗೆಯ ಕಲೆ ಬಟ್ಟೆಗಿರಣಿಗಳಿಂದ ನಾಶವಾಯಿತೋ, ಅದೇ ರೀತಿ ಸೋಪಿನ ಉಪಯೋಗ ಧಾವನಕಲೆಯನ್ನೇ ನಾಶಮಾಡಿತು. ಎಲ್ಲರೂ ನಡಸಬಹುದಾದರೆ ಅದು ಕಲೆಯಲ್ಲ. ಪ್ರತಿಯೊಂದು ಕಲೆಯೂ ಕೆಲವರ ಸ್ವಾಧೀನವಾಗಿದ್ದಿತು. ಆ ಕಲೆಗಳ ಉಪಯೋಗ ಜೀವನಕ್ಕೇ ಬೇಕಾಗಿದ್ದುದರಿಂದ ಯಾವ ಕಲೆಗಾರನಿಗೂ ನಿರುದ್ಯೋಗದ ಪ್ರಶ್ನೆ ಇರಲಿಲ್ಲ. ಆದುದರಿಂದಲೇ ನಮ್ಮ ಹಿಂದಿನ ಸಮಾಜ ಅಷ್ಟು ಚೆನ್ನಾಗಿದ್ದುದು. "ಬಟ್ಟೆ ಅಂತಾ ಕೊಳೆಯಾದ್ರೆ ಅಂಟವಾಳದ ಕಾಯಿ ಇಲ್ವಾ? ಅದಕ್ಕೇನ್ ಕಾಸ್ಕೊಡ್ಬೇಕಿಲ್ಲ. ಊರ ಮುಂದೇನೆ ಮರಗ್ಳು ಅವೆ. 'ಅಂಟವಾಳವಿಲ್ಲದ ಮಡಿವಾಳ' ಅಂತ ಗಾದೇ ಹಾಗೆ, ನಮ್ಗೆಲ್ಲಾ ಅಂಟವಾಳಾನೇ ಸರಿಯಪ್ಪ" ಎನ್ನುತ್ತಿದ್ದ ಓಬ.

ಈತ ಬಟ್ಟೆ ಒಗೆಯುವುದು ನೋಡುವುದಕ್ಕೆ ಬಹಳ ಚೆನ್ನಾಗಿತ್ತು, ಕೇಳುವುದಕ್ಕೆ ಇಂಪಾಗಿತ್ತು. ಈತ ಎರಡು ಕೈಗಳಲ್ಲೂ ಬಟ್ಟೆಯನ್ನು ಒಗೆಯುತ್ತಿದ್ದ. ಎರಡು ಬಂಡೆಗಳ ಮಧ್ಯೆ ನಿಂತುಕೊಂಡು ಎಡಗೈಯಲ್ಲಿ ಒಂದು ಬಟ್ಟೆ, ಬಲಗೈಯಲ್ಲಿ ಒಂದು ಬಟ್ಟೆ ಇಟ್ಟು, ಒಂದಾದ ಮೇಲೊಂದು ಬಟ್ಟೆಯನ್ನು ಅಥವಾ ಒಟ್ಟಿಗೆ ಒಗೆಯುತ್ತಿದ್ದ. ಈತ ಜೋರಾಗಿ ಬಂಡೆಯ ಮೇಲೆ ಬಟ್ಟೆಯನ್ನು ಬಡಚುತ್ತಿದ್ದಾಗ ಉಂಟಾದ ಶಬ್ದವನ್ನು ಸುತ್ತಲಿನ ಪ್ರಕೃತಿ ಹತ್ತಾರು ಕಡೆಯಿಂದ ಪ್ರತಿಧ್ವನಿಸುತ್ತಿತ್ತು. ಅವುಗಳನ್ನು ಕೇಳುವುದು ಬಹಳ ಹಿತವಾಗಿತ್ತು. ಈತ ಹೊಳೆಯಲ್ಲಿ ತನ್ನ ಜಾಗದಲ್ಲಿ ನಿಂತು ಬಟ್ಟೆಯನ್ನು ಒಗೆಯುವ ಶಬ್ದ ಊರಿಗೂ ಕೇಳಿಬರುತ್ತಿತ್ತು. ಓಹೋ, ಓಬ ಬಟ್ಟೆಯನ್ನು ಒಗೆಯುತ್ತಿದ್ದಾನೆ, ಎಂದು ನಮಗೆಲ್ಲರಿಗೂ ಗೊತ್ತಾಗುತ್ತಿತ್ತು. ಎಪ್ಪತ್ತು ವರ್ಷದಿಂದ ಒಂದೇ

ಜಾಗದಲ್ಲಿ ಬಟ್ಟೆಗಳನ್ನೊಗೆದು ಪಕ್ಕದ ಎರಡು ಬಂಡೆಗಳೂ ಸ್ನೇಹಯುಕ್ತ ವಾಗಿದ್ದಂತೆ, ಎಂದರೆ ಜಿಡ್ಡು ಬಳಿದಂತೆ, ನುಣುವಾಗಿ ಥಳಥಳಾ ಎಂದು ಹೊಳೆಯುತ್ತಿದ್ದವು. ತನ್ನ ಎಪ್ಪತ್ತು ವರ್ಷದ ಕಸಬಿನಲ್ಲಿ ¼ ಅಂಗುಲ ಅಥವಾ ⅜ ಅಂಗುಲದಷ್ಟು ಕಲ್ಲನ್ನು ಓಬ ಸವೆಸಿದ್ದ. ಈತನ ಬಾಳು ನಿಜವಾಗಿಯೂ ಕಲ್ಲಿನೊಡನೆ ಹೊರಾಟವೇ ಆಗಿದ್ದಿತು. ಕಲ್ಲಿನೊಡನೆ ಹೋರಾಡಿ ವಜ್ರಕಾಯ ನಾಗಿದ್ದ ನಮ್ಮ ಮಡಿವಾಳ ಓಬ.

ಓಬ ದೇವರಿಗೂ ಧಾವಕ. ನಮ್ಮೂರ ದೇವರಿಗೆ ಉಡಿಸುವ ಬಟ್ಟೆಗಳನ್ನು ಈತ ರಥೋತ್ಸವಕ್ಕೆ ಮುಂಚೆ ಒಗೆದುಕೊಡುತ್ತಿದ್ದ. ಇದಕ್ಕಾಗಿ ಇವನಿಗೆ ಯಾವ ವಿಧವಾದ ದ್ರವ್ಯಸಹಾಯವನ್ನೂ ದೇವಸ್ಥಾನದವರು ಕೊಡುತ್ತಿರಲಿಲ್ಲ. ಈ ಕೆಲಸವನ್ನು ಓಬ ತನ್ನ ಪವಿತ್ರಕರ್ತವ್ಯವೆಂದುಕೊಂಡಿದ್ದ, ತನಗೆ ದೇವರು ಕೊಟ್ಟಿರುವ ವರವೆಂದು ಭಾವಿಸಿದ್ದ. ದೇವರ ಬಟ್ಟೆಗಳನ್ನು ಒಗೆಯುವ ದಿವಸ ಈತ ಉಪವಾಸವಿರುತ್ತಿದ್ದ. ಮಡಿಯುಟ್ಟು, ಶುಭ್ರವಾದ ಕೌಪೀನವೊಂದನ್ನು ಮಾತ್ರ ಧರಿಸಿ, ದೇವಸ್ಥಾನಕ್ಕೆ ತನ್ನ ಮನೆಯವರನ್ನೆಲ್ಲಾ ಕರೆದುಕೊಂಡು ಹೋಗುತ್ತಿದ್ದ. ದೇವಸ್ಥಾನವನ್ನು ಮೂರು ಸಲ ಸುತ್ತಿ, ದೇವಸ್ಥಾನದ ಒಳಗೆ ಪ್ರವೇಶಿಸುತ್ತಿದ್ದ. ನಡೆಯಬೇಕಾದ ಪೂಜೆಗಳೆಲ್ಲ ನಡೆದ ಮೇಲೆ, ಇವನಿಗೆ ಪೂಜಾರಿಗಳು ದೇವರಿಗೆ ಉಡಿಸುವ ವಸ್ತ್ರಗಳನ್ನೆಲ್ಲಾ ಕೊಡುತ್ತಿದ್ದರು. ಓಬ ಅವುಗಳನ್ನೆಲ್ಲಾ ತಲೆಯ ಮೇಲೆ ಇಟ್ಟುಕೊಂಡು, ಓಲಗದೊಡಗೂಡಿ ಹೊಳೆಗೆ ಹೋಗುತ್ತಿದ್ದ. ಬಟ್ಟೆಗಳನ್ನು ಒಗೆದು, ಮತ್ತೆ ಸ್ನಾನಮಾಡಿ, ಓಲಗದೊಡನೆ ದೇವಸ್ಥಾನಕ್ಕೆ ಬಂದು, ಒಗೆದು ಒಣಗಿಸಿದ ಬಟ್ಟೆಗಳನ್ನು ದೇವರಲ್ಲಿ ಅರ್ಪಿಸು ತ್ತಿದ್ದ. ಆಗ ಇವನಿಗೆ ದೇವಸ್ಥಾನದ ಗೌರವ ಸಲ್ಲುತ್ತಿತ್ತು. ಎಂದರೆ ಈತನಿಗೆ ಪೂಜಾರಿಗಳು ಮಂತ್ರಪುರಸ್ಸರವಾಗಿ ಮಂತ್ರಾಕ್ಷತೆ, ಹಾರಗಳನ್ನರ್ಪಿಸುತ್ತಿದ್ದರು. ಇದಾದ ಮೇಲೆ ದೇವಸ್ಥಾನದಲ್ಲಿ ದೇವರ ಪ್ರಸಾದವನ್ನು ತೆಗೆದುಕೊಳ್ಳುತ್ತಿದ್ದ. ಅಲ್ಲಿಗೆ ವರ್ಷಕ್ಕೆ ಒಂದೇ ದಿನ ಬರುವ ಆ ಸಂಭ್ರಮದ ಕಾರ್ಯ ಮುಗಿದು ಹೋಗುತ್ತಿತ್ತು. ಮಾರನೆಯ ದಿನದಿಂದ ಈತ " ನಮ್ಮ ಮಡಿವಾಳ ಓಬ."

ಓಬ ಬರಿಯ ಅಗಸನೇ ಅಲ್ಲ. ಈತನಿಗೆ ಮತ್ತೊಂದು ಪವಿತ್ರತರ ಕರ್ತವ್ಯವಿತ್ತು. ಅದು ಮಾರಿಯಮ್ಮನ ಪೂಜೆ. ಊರನ್ನು ಪಿಡುಗು, ಕಾಲರಾಗಳಿಂದ ತೊಳೆದು ಮಡಿಮಾಡುವುದು ಇವನಿಗೇ ಸೇರಿತ್ತು.

ಬೆಳಗ್ಗೆ ಎದ್ದ ಕ್ಷಣ ಪ್ರತಿದಿನವೂ ಹೊಳೆಗೆ ಹೋಗಿ ಸ್ನಾನಮಾಡಿ ಬಂದು, ಊರ ಮುಂದಿನ ಮಾರಿಯಮ್ಮನಿಗೆ ಪೂಜೆ ಮಾಡುವುದು ಇವನ ಮೊದಲ ಕೆಲಸ. ಅಮ್ಮನಿಗೆ ತಳಿಗೆಯನ್ನು ಯಾರಾದರೂ ಊರಿನವರು ಕೊಟ್ಟರೆ ಆ ದಿನ ಓಬ ವಿಶೇಷವಾದ ಪೂಜೆಯನ್ನು ಮಾಡುತ್ತಿದ್ದ.

ಸುತ್ತಮುತ್ತ ಎಲ್ಲಾದರೂ ಪಿಡುಗು, ಕಾಲರಾ, ಸಿಡುಬಮ್ಮಗಳ ಗಲಾಟೆ ಯೆದ್ದರೆ, ಮಾರಿಯಮ್ಮನ ಜಾತ್ರೆ ನಡೆಯುತ್ತಿತ್ತು. ಮಾರಿಯಮ್ಮನಿಗಾಗಿಯೇ ಬಿಟ್ಟಿದ್ದ ಕೋಣವೊಂದನ್ನು ಅವೊತ್ತು ಬಲಿ ಕೊಡುತ್ತಿದ್ದರು. ವಿಶೇಷವಾದ ಪೂಜೆಗಳು ನಡೆದ ಮೇಲೆ, ಮಾರಿಯಮ್ಮನನ್ನು ಊರ ಸುತ್ತ ಮೆರವಣಿಗೆ ಮಾಡುತ್ತಿದ್ದರು. ಯಾವ ವಿಧವಾದ ಕಾಯಿಲೆಗಳಿದ್ದರೂ ಎಲ್ಲಾ ಊರಿನಿಂದ ಹೊರಕ್ಕೆ ಓಡಿಹೋಗುತ್ತಿದ್ದುವು. ಮಾರಿಯಮ್ಮನ ಜಾತ್ರೆಯನ್ನು ತಪ್ಪಿಸಲು ಅನೇಕ ನವಯುವಕರು ಪ್ರಯತ್ನಪಟ್ಟರು. ಆಗ ಓಬ, ಅಂತಹ ಯುವಕ ನೊಬ್ಬನಿಗೆ, "ಬೇಡ ಕಣಪ್ಪ, ಅವಳಿಗೆ ಕೋಪ ಬಂದ್ರೆ ಸುಮ್ಗೆ ಬಿಡಾಕಿಲ್ಲ. ನಿಮ್ಗೆನ್ನೂ ಗೊತ್ತಿಲ್ಲ, ಹೈಕ್ಳು, ಸುಮ್ನಿರ್ರಪ್ಪ" ಎಂದು ಸಮಾಧಾನ ಮಾಡಿದ. ಕೊಂಚ ಮೊಂಡುಹಿಡಿದ ಯುವಕನೊಬ್ಬನಿಗೆ ಮಾರನೆಯ ದಿವಸವೇ ಜ್ವರ ಬಂದುಬಿಟ್ಟಿತು. ಆಗ ಆತ, "ತಪ್ಪಾಯ್ತಪ್ಪ. ಇನ್ನು ಹಾಗೆಲ್ಲಾ ಮಾಡೋ ದಿಲ್ಲ" ಎಂದುಕೊಂಡು ಅಮ್ಮನಿಗೆ ತಳಿಗೆಯನ್ನು ಕೊಟ್ಟ.

ಮಾರಿಜಾತ್ರೆಯಲ್ಲಿ ಓಬನನ್ನು ನೋಡುವುದೇ ಒಂದು ಚೆಂದ. ಬೆಳಗಿ ನಿಂದ ಉಪವಾಸಮಾಡಿ, ಶುಭ್ರವಾಗಿ, ಕೌಪೀನವನ್ನು ತೊಟ್ಟು, ಮಾರಿಯಮ್ಮ ನಿಗೆ ಪೂಜೆ ಮಾಡುತ್ತಿದ್ದ. ಮೆರವಣಿಗೆಯಲ್ಲಿ, ಮಾರಿಯಮ್ಮನನ್ನು ಈತನೇ ಹೊರುತ್ತಿದ್ದುದು. ಅದನ್ನು ಹೊತ್ತ ಕೂಡಲೇ ಓಬನಿಗೆ ಆವೇಶ ಬಂದುಬಿಡು ತ್ತಿತ್ತು. ಕುಣಿಯಲು ತೊಡಗುತ್ತಿದ್ದ. ಆಗ ಇವನ ಕಣ್ಣುಗಳು ಕೆಂಪಗಾಗು ತ್ತಿದ್ದುವು. ಮುಖ ಇನ್ನೂ ಕಪ್ಪಗಾಗುತ್ತಿತ್ತು. ನೋಡಲು ಭಯಂಕರನಾಗಿ ತೋರುತ್ತಿದ್ದ. ಈತನಿಗೆ 'ದೇವರು ಬಂದ' ಸಮಯದಲ್ಲಿ, ಪ್ರಶ್ನೆಗಳನ್ನು ಕೇಳಿ ಉತ್ತರ ಪಡೆಯಬಹುದಿತ್ತು. ಆ ಉತ್ತರಗಳು ಎಷ್ಟೋ ಸರಿಹೋಗಿವೆ.

ಓಬ ಪ್ರತಿ ವರ್ಷವೂ ಮಾರಿಯಮ್ಮನನ್ನು ಹೊರುವುದು ತನ್ನ ಆದ್ಯ ಕರ್ತವ್ಯವೆಂದು ಭಾವಿಸಿದ್ದ. ಅದನ್ನು ಬಿಡದೆ ನಡಸಿಕೊಂಡು ಬಂದಷ್ಟು ವರ್ಷವೂ ತನಗೆ ಸಾವಿಲ್ಲವೆಂದು ನಂಬಿದ್ದ. ಆ ನಂಬಿಕೆ ನಿಜವಾಯಿತು.

ಓಬ ಅಂತ್ಯಾವಸ್ಥೆಯಲ್ಲಿದ್ದಾನೆ ಎಂಬ ಸುದ್ದಿ ಕೇಳಿ, ಊರಿನವರೆಲ್ಲ ಹೋಗಿ ಅವನ ಅಂತ್ಯದರ್ಶನವನ್ನು ಪಡೆದರು. ನಾನು ಕೂಡ ಅವನನ್ನು ನೋಡಿಕೊಂಡು ಬರೋಣವೆಂದು ಹೋಗಿದ್ದೆ. ನಾನು ಹೋಗಿ ನೋಡುವಾಗ, ಅವನಿಗೆ ಪ್ರಜ್ಞೆ ಇರಲಿಲ್ಲ. ಆಗಲೇ ಮೇಲುಸಿರು ಬರುತ್ತಿತ್ತು. ದೇಹದ ಗಾತ್ರ ಕಡಮೆಯಾಗದೆ ಇದ್ದರೂ, ಮುಖದಲ್ಲಿ ಕಾಂತಿ ಇರಲಿಲ್ಲ. ಇವನಿಗೆ ಯಾವಾಗಲೂ ಮುಖ ಕಳೆಗುಂದಿರಲಿಲ್ಲ; ತೇಜಸ್ಸು ತುಂಬಿ ತುಳುಕುತ್ತಿತ್ತು. ಮನೆಯವರೆಲ್ಲಾ ಗೋಳೋ ಎಂದು ಅಳುತ್ತಿದ್ದರು. ನೋಡಿಕೊಂಡು ಹೋಗಲು ಬಂದಿದ್ದ ಜನರ ಮುಖದಲ್ಲಿ ದುಃಖದ ಸೂಚನೆ ತೋರಿಬರುತ್ತಿತ್ತು. ನನಗೂ ಹೆಚ್ಚು ಹೊತ್ತು ಅಲ್ಲಿರಲಾಗಲಿಲ್ಲ. ಮಂಕುಬಡಿದವನಂತೆ ಮನೆಗೆ ಬಂದುಬಿಟ್ಟೆ.

ಈ ವರ್ಷ ಮಾರಿಯ ಜಾತ್ರೆಯನ್ನು ಮಾಡಬೇಕೆಂದಿರುವಾಗ, ರಾತ್ರಿಯ ಹೊತ್ತು, ದಾರಿಯಲ್ಲಿ ಒಂದು ಕಲ್ಲೆಡವಿ ಬಿದ್ದುಬಿಟ್ಟನಂತೆ. ವಿಧಿವಿಲಾಸ! ಗಟ್ಟಿಮುಟ್ಟಾದ ಆಳು ಓಬ ತೊಡೆ ಮುರಿದುಕೊಂಡ. ಮಾರಿಯಮ್ಮನನ್ನು ಹೊರಲಾಗಲಿಲ್ಲ, ಸತ್ತುಹೋದ. ಕಣ್ಣು ಮುಂದೆ ಇಂಥ ನಿದರ್ಶನಗಳನ್ನು ನೋಡಿಕೊಂಡಿರುವ ಆಧುನಿಕನಾದ ನನಗೆ ಏನು ಹೇಳಲೂ ಗೊತ್ತಾಗುವುದಿಲ್ಲ. ಈತನ ಸಾವಿಗೆ ಊರಿಗೆ ಊರೇ ನೊಂದಿತು.

ಮತ್ತೆ ನಾನು ಓಬನ ಮುಖವನ್ನು ಕಾಣುವುದಿಲ್ಲ. ಆದರೂ ನೆನೆಸಿಕೊಂಡಾಗಲೆಲ್ಲಾ ನನಗೆ ಅವನು ಕಾಣುತ್ತಾನೆ. ಆಜಾನುಬಾಹು—ಕಪ್ಪು ದೇಹ—ತುಂಬು ಮೀಸೆ—ಕಿರಿಗಣ್ಣೊಂದು ಬಿರಿಗಣ್ಣೊಂದು—ಮೊರದಗಲದ ಕಿವಿ—ಸ್ಲೇಟಿನಂತಹ ಹಣೆ—ಹೊರಕ್ಕೆ ಚಾಚಿದ ಮೂಗು—ಪ್ರತಿಯೊಂದು ಭಾಗವೂ ಕಳೆಯಿಂದ ತುಂಬಿರುತ್ತಿತ್ತು.

ನಮ್ಮ ಅಗಸ ಓಬ ಸತ್ತು ವಾರವಾಯಿತು. ಓಬ ಅಮರ.✓

**ಜಿ. ಎಸ್. ಶ್ರೀನಿವಾಸಮೂರ್ತಿ**

## ಸರ್ವಜ್ಞ ವಚನ

ಎಲ್ಲ ಬಲ್ಲವರಿಲ್ಲ ಬಲ್ಲವರು ಬಹಳಿಲ್ಲ
ಬಲ್ಲಿದರು ಇದ್ದು ಬಲವಿಲ್ಲ—ಸಾಹಿತ್ಯ-
ವೆಲ್ಲರಿಗಿಲ್ಲ ಸರ್ವಜ್ಞ.

## ಮಹತ್ತ್ವದ ಮೂಗುಗಳು

ತಾಯಿಯಂತೆ ಮಗಳು, ನೂಲಿನಂತೆ ಸೀರೆ ಎಂದು ಕನ್ನಡದಲ್ಲಿ ಒಂದು ಅವಳಿಗಾದೆ ಇದೆ. ಇದರ ಜೊತೆಗೆ 'ಮೂಗಿನಂತೆ ಮುಖ' ಎಂದು ಕೂಡಿಸಿಕೊಂಡು, ಒಂದು ತಿವಳಿ ಗಾದೆಯನ್ನು ತಯಾರಿಸಬಹುದು.

ಮೂಗು ಮುಖದ ಹೃದಯ; ಕಣ್ಣುಗಳೇ ಶ್ವಾಸಕೋಶಗಳು. ಮುಖದ ಒಂದು ಆಕಾರ ವಿಕಾರಕ್ಕೆ ಮೂಗೇ ಕಾರಣ. ಮೂಗು ಚೆನ್ನಿದ್ದರೆ ಮುಖವೂ ಸೊಗಸು. ಮೂಗಿನಿಂದ ಮುಖದ ಸೌಂದರ್ಯ, ಸೊಬಗು. ಮೂಗಿಗೆ ಪ್ರಾಧಾನ್ಯ ಬಂದಿರುವುದು ಅದು ಮುಖದಿಂದ ಮುಂದೆ ಬಂದಿರುವುದರಿಂದಲೇ ಅಲ್ಲ. ಅದು ಮೂಗಿನ ಮುಂದಾಳುತನವನ್ನು ಮಾತ್ರ ಸೂಚಿಸುತ್ತದೆ. ಮುಂದಾಳುತನವಿರಬೇಕಾದರೆ ಧೈರ್ಯ, ಸ್ಥೈರ್ಯಗಳಿರಬೇಕು. ಧೈರ್ಯ ಬರಬೇಕಾದರೆ ತನ್ನ ಕಾರ್ಯದಲ್ಲಿನ ಸತ್ಯತೆಯನ್ನು ಅರಿತಿರಬೇಕು. ಕಾರ್ಯದಲ್ಲಿ ಸತ್ಯತೆಯುಂಟಾಗಬೇಕಾದರೆ ಸತ್ಯಪ್ರೇಮಿಯಾಗಿರಬೇಕು. ಸತ್ಯಪ್ರೇಮವೇ ಮಹಾತ್ಮರ ಲಕ್ಷಣ. ಆದುದರಿಂದ ಮೂಗು ಸಹಾ ಮಹಾಜೀವಿ. ಅದಕ್ಕೂ ಮಹತ್ತ್ವವುಂಟು. ಅದರ ಈ ಮಹತ್ತ್ವವನ್ನೇ ಈಗ ನಾನು ಹೇಳಹೊರಟಿರುವುದು. ಅದರ ಮಹತ್ತ್ವವನ್ನು ನನ್ನ 'ಮೂಗಿನ ನೇರ'ಕ್ಕೆ ಹೇಳುತ್ತಿರುವೆನೆಂದು ವಾಚಕರಾರೂ ಭಾವಿಸಬಾರದು!

ರಾಮಾಯಣದ ಕಥೆಯ ಬೆಳವಣಿಗೆಗೆ ಕಾರಣಳಾದ ವ್ಯಕ್ತಿ ಮಂಥರೆ ಎಂದು ಅನೇಕರ ಅಭಿಪ್ರಾಯ ಇರಬಹುದು. ಆದರೆ ಅವಳಷ್ಟೇ ಅಥವಾ ಇನ್ನೂ ಸ್ವಲ್ಪ ಹೆಚ್ಚಿಗೆ ಕಾರಣಳಾದ ಮತ್ತೊಂದು ವ್ಯಕ್ತಿಯುಂಟು. ಆಕೆಯೇ ರಾವಣನ ತಂಗಿ, ಶೂರ್ಪಣಖಿ. ಲಕ್ಷ್ಮಣನಿಂದ ಕಿವಿ ಮೂಗುಗಳನ್ನು ಕೊಯಿಸಿಕೊಂಡು ಅಪಮಾನ ಹೊಂದಿದವಳು ಈಕೆಯೆ. ಅದಕ್ಕೆ ಪ್ರತೀಕಾರ ರಾವಣನಿಂದ ಸೀತಾಪಹರಣ. ಇದಕ್ಕೆ ಕಾರಣ ಅವಳ ಕಿವಿ ಮೂಗಲ್ಲದೆ ಮತ್ತೇನು? ಬರೆ ಕಿವಿ ಮಾತ್ರ ಹೋಗಿದ್ದರೆ ಆಕೆ ಸೆರಗನ್ನು ಸರಿಯಾಗಿ ಹೊದ್ದು ಮರೆಮಾಡಿಕೊಳ್ಳುತ್ತಿದ್ದಳೋ ಏನೋ! ಆದರೆ ಅವಳ ಮೂಗು ರಾಮರಾವಣರ ಕಾಳಗಕ್ಕೆ—ಏಕೆ, ಇಡೀ ರಾಮಾಯಣಕ್ಕೆ—ಕಾರಣವಾದ ಮೂಗು ಅವಳ ಪಾಲಿಗಿಲ್ಲವಾಯಿತು. ಅವಳ ಆ ಇಲ್ಲವಾದ ಮೂಗಿನಿಂದಲೇ

ರಾಮಾಯಣ ನಡೆಯಿತೆಂದರೆ ಉತ್ಪ್ರೇಕ್ಷೆಯೇನೂ ಆಗಲಾರದು. ಇದೆಲ್ಲವೂ ಪುರಾಣ ಪ್ರಪಂಚಕ್ಕೆ ಸಂಬಂಧಿಸಿದುದೆಂದು ಸಂದೇಹಪಡುವಿರೇನೊ? ಅದು ಹೋಗಲಿ. ಟ್ರಾಯ್ ದೇಶದ ಹೆಲೆನಳ ಹೆಸರನ್ನಾದರೂ ಕೇಳಿರುವಿರಷ್ಟೆ? ಅದನ್ನು ಕೇಳಿಲ್ಲದಿದ್ದರೆ ಈಗ ಕೇಳುತ್ತಿರುವಿರಿ. ಕೇಳಿ, ರಸಿಕರಾಗಿರಿ. ಆಕೆ ಇಹಲೋಕದ ಸೌಂದರ್ಯದೇವತೆ. ಅವಳ ಮೂಗು, ನನ್ನ ದೃಷ್ಟಿಯಲ್ಲಿ, ಸೌಂದರ್ಯನಿಧಿ. ಅಂತಹ ಮೂಗನ್ನು ಪಡೆದಿದ್ದ ಅವಳನ್ನು ಪಡೆಯುವದಕ್ಕಾಗಿ ಎರಡು ದೇಶಗಳಿಗೆ ಬೃಹತ್ ಯುದ್ಧವೇ ನಡೆಯಿತು. ಈ ಎರಡು ಯುದ್ಧಕ್ಕೆ—ಒಂದು ರಾಮ-ರಾವಣರಿಗೆ, ಮತ್ತೊಂದು ಗ್ರೀಸ್ ಮತ್ತು ಟ್ರಾಯ್ ದೇಶಗಳಿಗೆ—ಕಾರಣವಾದ ಮೂಗು ಮಹತ್ತ್ವದ್ದೇ ಸರಿ ಅಲ್ಲವೆ?

ಮತ್ತೆ, ಕ್ಲಿಯೋಪಾತ್ರಾ ಮೂಗು ಏನು ಮಾಡಿತು? ಏನು ಮಾಡಲಿಲ್ಲ? ಮಂಕುತಿಮ್ಮ ಹೇಳಿರುವಂತೆ—

> ನಾಸಿಕದ ಮಾಟದಿಂದಾ ಕ್ಲಿಯೋಪ್ಯಾಟ್ರಳಿಗೆ
> ದಾಸರಾದರು ಶೂರ ಸೀಸರ್ ಆ್ಯಂಟನಿಗಳ್
> ದೇಶಚರಿತೆಗಮವರ ಜಸಕಮಂಕುಶವಾಯ್ತು
> ನಾಸಾಪುಟದ ರೇಖೆ— ಮಂಕುತಿಮ್ಮ!

ಮೂಗನ್ನು ಮೂಗುಂಗುರ, ಮೂಗುಬೊಟ್ಟು, ಇವೇ ಮೊದಲಾದ ಆಭರಣಗಳಿಂದ ಅಲಂಕರಿಸುವುದು ನಮ್ಮ ದೇಶದ ಸ್ತ್ರೀಯರಲ್ಲಿ ಮೊದಲಿನಿಂದಲೂ ಬಂದ ಪದ್ಧತಿಯಾಗಿದೆ. ಇದಕ್ಕೆ ಕಾರಣವಿಲ್ಲದೆ ಇಲ್ಲ. ಇಡೀ ದೇಶದ ಸ್ತ್ರೀಯರೆಲ್ಲರ ಮೂಗು ಸುಂದರವಾಗಿರುವುದು ಅಸಂಭವ, ವಿಕಾರವೇ ಹೆಚ್ಚು. (ವಾಚಕಿಯರಾರೂ ಕೋಪಿಸಬಾರದು!) ಕೆಲವರು ತಮ್ಮ ಈ ಕೊರತೆಯನ್ನು ನೀಗಿಸಲು ಮತ್ತು ಐಬನ್ನು ಮುಚ್ಚಲು ಮೂಗನ್ನು ಆ ರೀತಿ ಅಲಂಕರಿಸುತ್ತಾರೆಂದು ನನ್ನ ಭಾವನೆ. ಅಲಂಕರಿಸಿದ ಮೂಗನ್ನುಳ್ಳ ಮಹಿಳೆಯರನ್ನು ಕಂಡವರ ಮನಸ್ಸು ಅವರು ತೊಟ್ಟಿರುವ ಆಭರಣದ ಮೌಲ್ಯವನ್ನು ಚಿಂತಿಸುತ್ತದೆ. ಅದರ ಆಕಾರ, ಕುಶಲತೆಗಳನ್ನು ನೋಡುತ್ತ, ಮನಸ್ಸು ಮೂಗಿನ ರೂಪವನ್ನು ಮರೆಯುತ್ತದೆ. ವೀಕ್ಷಕನಲ್ಲಿ ವಿಮರ್ಶಕನ ದೃಷ್ಟಿ ಇಲ್ಲವಾಗಿ ಬರಿಯ ಸೌಂದರ್ಯೋಪಾಸಕನಾಗುತ್ತಾನೆ. ಇದು ಚಂಚಲ ಮನಸ್ಸಿನ ಮಾನವನಿಗೆ ಮೂಗು ಬೀಸುವ ಮಾಯಾಜಾಲ. ಏನೆ ಇರಲಿ, ಮೂಗನ್ನು ಅಲಂಕರಿಸು

ವವರು ಅದರ ರೂಪವನ್ನು ಮೊದಲು ಕೆಡಿಸಿ, ಅನಂತರ ಶೃಂಗರಿಸುತ್ತಾರೆಂದು ನನ್ನ ಅಭಿಪ್ರಾಯ. ಮೊದಲು, ಸೌಂದರ್ಯಸಾಧಕವಾದ ಆ ಮೂಗನ್ನು ಚುಚ್ಚಿಸಿಕೊಂಡು—ಅದಕ್ಕೆ ಒಂದು ಹಬ್ಬವನ್ನೇ ಆಚರಿಸಿ—ಕೆಲವೊಂದು ದಿನ ಅದಕ್ಕೆ ದಾರ ದಳಿಸಿಕೊಂಡೋ, ಕಡ್ಡಿ ಪೋಣಿಸಿಕೊಂಡೋ, ಇದ್ದ ಸಹಜ ಸೌಂದರ್ಯವನ್ನು ಇಲ್ಲವಾಗಿಸಿಕೊಳ್ಳುವ ದೃಶ್ಯ ಕವಿಹೃದಯದಲ್ಲಿ ಕಣ್ಣೀರು ಕರೆಸುವಂತಹದು, ಮಾನವನ ಮನಸ್ಸು ಮಿಡಿಯುವಂತಹದು. ಸುರೂಪಕ್ಕೆ ಮುನ್ನ ಕುರೂಪ; ಸುಖಕ್ಕೆ ಮುನ್ನ ನೋವು, ದುಃಖ!

ಮೂಗನ್ನು ಚುಚ್ಚಿಸಿಕೊಂಡು ಅದನ್ನು ಅಲಂಕರಿಸಿಕೊಳ್ಳುವ, ಅದರಿಂದ ಸೌಂದರ್ಯವನ್ನು ಹೆಚ್ಚಿಸಿಕೊಳ್ಳುವ ಈ ಸಂಪ್ರದಾಯ ಇತ್ತೀಚೆಗೆ ಪಶ್ಚಿಮ ದೇಶಗಳಲ್ಲಿ ಕೂಡ—ಮುಖ್ಯವಾಗಿ ಇಂಗ್ಲೆಂಡಿನಲ್ಲಿ—ಪಸರಿಸಿದೆ. ಅಲ್ಲಿನ ರಾಜಮನೆತನದ ಹಾಗೂ ಸಾಮಾನ್ಯ ಸ್ತ್ರೀಯರಲ್ಲಿ ಈ ಪದ್ಧತಿ ಬಹುವೇಗದಿಂದ ಹರಡುತ್ತಿದೆ. ನಮ್ಮವರು ಅವರನ್ನು ಅನುಕರಿಸಿ ಕಿವಿ, ಮೂಗು, ಹಣೆ, ಕೈಗಳನ್ನು (watchಅನ್ನು ಬಿಟ್ಟು) ಅಲಂಕರಿಸದೆ ಹಾಗೆಯೆ ತಿರುಗಾಡಲಿಚ್ಛಿಸಿದರೆ, ಅಲ್ಲಿನವರು ನಮ್ಮ ದೇಶದ ಸ್ತ್ರೀಯರಂತೆ ಕಾಣಲು ಪ್ರಯತ್ನಿಸುತ್ತಿರುವುದು ಸೋಜಿಗವೇ ಸರಿ. ಅಲ್ಲದೆ, ನಮ್ಮಲ್ಲಿ ಮೂಗು ಚುಚ್ಚುವುದನ್ನು ಪ್ರತಿ ಮನೆಯ ಹೆಂಗಸೂ ಅರಿತಿರುವರಾದರೆ ಅವರಲ್ಲಿ ಅದಕ್ಕೇನೆ ಒಬ್ಬ ಪ್ರವೀಣ (expert) ಇರುವನಂತೆ!

ಮೂಗುಗಳಲ್ಲೆಲ್ಲಾ ಅತಿವಿಲಕ್ಷಣವಾದುದೆಂದು ಹೆಸರು ಪಡೆದ ಮೂಗು ಫ್ರಾನ್ಸಿನ ಸಾಹಸಿ-ಸಿಪಾಯಿ, ಸೈರಾನೋ ಡಿ ಬರ್ಗೆರಾಕ್ (Cyrano de Bergerac) ಎಂಬವನದು. ಆತನ ಮೂಗು ಅತಿ ವಿಶಾಲವಾಗಿಯೂ ಕುರೂಪವಾಗಿಯೂ ಇತ್ತೆಂದು ಆತನ ಸಮಕಾಲೀನನೊಬ್ಬನು ಹೇಳಿದ್ದಾನೆ. "ಅದು (ಮೂಗು) ಮುಖದ ಹೆಚ್ಚು ಭಾಗವನ್ನೆಲ್ಲಾ ಆವರಿಸಿಕೊಂಡು, ಮುಖದ ಮಧ್ಯದಲ್ಲಿ ಒಂದು ಪರ್ವತದಂತಿದ್ದು, 'ಫೇಂಡಾವಿನ ಮೂತಿಯಂತೆ, ಕ್ಷಿಪ್ರದಲ್ಲಿಯೇ ಬಾಯಿಯತ್ತ ಇಳಿಮುಖವಾಗಿತ್ತೆಂದು' ಆತನೇ ವಿಶದೀಕರಿಸಿದ್ದಾನೆ; ತನ್ನ ಅದ್ವಿತೀಯ ಮೂಗಿನಿಂದಾಗಿ ಸಾವಿರ ದ್ವಂದ್ವಯುದ್ಧಗಳಲ್ಲಿ ಹೋರಾಡಿ ಹನ್ನೆರಡು ಜನರ ಪಾಲಿಗೆ ಯಮನಾದ ಸೈರಾನೋ! ಇದು ಮೂಗಿನ ಮಹತ್ತ್ವವಲ್ಲದೆ ಮತ್ತೇನು? ಅಲ್ಲದೆ, ಈಗಲೂ ನಮ್ಮಲ್ಲಿಯೂ ವಿಕಾರವಾದ, ಕುರೂಪ

ವಾದ ಮೂಗನ್ನುಳ್ಳವರು ಯಾರಾದರೂ—ತನ್ನಲ್ಲಿನ ನಾಚಿಕೆ ಮತ್ತು ಆಗುವ ಅವಮಾನಗಳನ್ನು ಲೆಕ್ಕಿಸದೆ—ಬಂದು ನನ್ನನ್ನು ಕಂಡದ್ದೇ ಆದಲ್ಲಿ, ಅವರನ್ನು —ಎವರೆಸ್ಟ್ ಆರೋಹಿ ತೇನ್‌ಸಿಂಗ್‌ಗಿಂತಲೂ ಹೆಚ್ಚಿನ ಪ್ರಖ್ಯಾತರನ್ನಾಗಿ ಮಾಡಲು ಸಂಕಲ್ಪಿಸಿದ್ದೇನೆ. ಯಾರುಂಟು ಮುಂದೆ ಬರುವವರು?

ಇಂದು ಹೆಸರುವಾಸಿಯಾದ ನಾಸಿಕವೆಂದರೆ Jimmy (schnozzle) Durant ನದು. ಡ್ಯೂರೆಂಟನಿಗೆ, ಹಾಸ್ಯಾಸ್ಪದವಾದರೂ ಪ್ರಸಿದ್ಧಿಪಡೆದ ಮೂಗಿನ ಅಪೂರ್ವ ಆಸರೆಯುಳ್ಳ ಆತನಿಗೆ ಎಲ್ಲಾ ಕಾಲದ ಖ್ಯಾತಿ ಖಂಡಿತ. ಸರ್ವದಾ, ಅವನ ಮೂಗಿನ ಉದ್ದ ವೃತ್ತಪತ್ರಿಕೆಗಳ 'ಹರಟೆ ಬರಹಗಾರ'ರ ವಸ್ತುವಾಗಿದೆ. ವರದಿಗಳಂತೆ, 5 ರಿಂದ 8 ಅಂಗುಲದ ವರೆಗೂ ಇದೆಯಂತೆ. ಜಿಮ್ಮಿಯು ವೈಯಕ್ತಿಕವಾಗಿ ವಾಸ್ತವಾಂಶವನ್ನು ತಿಳಿಯಪಡಿಸಲಿಚ್ಛಿಸುವು ದಿಲ್ಲ; ಹಾಗೂ ಅಂಗವಿನ್ಯಾಸಪರಿಶೀಲನೆಯಲ್ಲಿ ಸಿಕ್ಕು, ತಾನೇಕೆ ಪೇಚಾಡಲಿ ಎನ್ನುತ್ತಾನೆ! ಅದೆಂತೇ ಇರಲಿ, ಅದನ್ನು ಕುರಿತು ಕವನಗಳನ್ನು ಕಟ್ಟಿ ಹಾಡುವು ದಲ್ಲದೆ—ಆತ ತನ್ನ ಮೂಗಿಗೆ ಎಷ್ಟು ಮಹತ್ತ್ವಕೊಟ್ಟಿರುವನೆಂದರೆ—ಅದನ್ನು £ 50,000 ಗೆ ವಿಮೆ ಮಾಡಿದ್ದಾನೆ!

ಅನೇಕರು ಮೂಗು ಇರುವ ಸನ್ನಿವೇಶ ಮತ್ತು ಹಿನ್ನೆಲೆಗಳಿಂದ ಅವರವರ ಪೂರ್ಣತೆಯನ್ನು ಅಳೆಯುತ್ತಾರೆ. ಆದರೆ ಮೂಗಿನ ಪರಿಪೂರ್ಣತೆಯನ್ನು ಅಳೆಯಲು ಪ್ರಾಚೀನ ಪ್ರಮಾಣ ಒಂದಿದೆ. ಅದನ್ನು T. Cooke ಎಂಬಾತ 'The Science of Physiognomy' ಎಂಬ ಪುಸ್ತಕದಲ್ಲಿ ಹೇಳಿದ್ದಾನೆ. ಮತ್ತು ಅದು ಅಸತ್ಯವೆಂದು ಇದುವರೆಗೂ ಯಾರೂ ವಾದಿಸಿಲ್ಲ. ಅದರ ಪ್ರಕಾರ, ಪರಿಪೂರ್ಣವಾದ ನಾಸಿಕವು ತಲೆಯ ಉದ್ದದ 1/4 ಭಾಗವೂ, ಮುಖದ ಉದ್ದದ 1/3 ಭಾಗವೂ ಇರಬೇಕಂತೆ. ಅಲ್ಲದೆ ಮೂಗಿನ ಹೊಳ್ಳೆ (nostril) ಅದರ ಅಗಲವು ಕಣ್ಣಿನ ಅಗಲದಷ್ಟು, ಮೂಗಿನ ಮೂಲದಿಂದ ಮುಂತುದಿಯವರೆಗಿನ ಉದ್ದ ಹಣೆಯ ಆಳದಷ್ಟೂ ಇರಬೇಕಂತೆ. ನಿಮ್ಮದನ್ನು ಅಳೆಯಿರಿ; ಅದು ಯಾವ ಆಕಾರದಲ್ಲಿರುವುದೆಂದು ಅರಿಯಿರಿ!

ಅನೇಕ ವಿಷಯಗಳನ್ನು ಅಧ್ಯಯನಮಾಡಿದ್ದ Leonardo da Vinci ಮತ್ತೂ ಮುಂದೆ ಹೋದ. ಆತನು ಮೂಗಿಗಾಗಿ ಎಂಟು ಪ್ರತ್ಯೇಕ ಪಂಗಡ ಗಳನ್ನು—ಎಲ್ಲ ಬಗೆಯ ಮೂಗುಗಳನ್ನೂ ವರ್ಗೀಕರಿಸುವಂತೆ—ರಚಿಸಿದನು.

ಆದರೂ ಒಮ್ಮೊಮ್ಮೆ ಗೋಚರವಾಗುವ ಕೆಲವೊಂದು ಮೂಗುಗಳು ಆತನ ಲಕ್ಷಣ ನಿರೂಪಣೆಯಿಂದ ನುಣುಚಿಕೊಳ್ಳುತ್ತವೆ. ಮೇಲ್ಭಾಗ ನಿಮ್ನಮಧ್ಯ (concave) ವಾಗಿದ್ದು ಕೆಳಭಾಗ ನೇರವಾಗಿಯೂ, ಮೇಲ್ಭಾಗ ನೇರವಾಗಿಯೂ ಕೆಳಭಾಗ ನಿಮ್ನಮಧ್ಯವಾಗಿಯೂ ಇರುವಂತಹವೇ ಅವು.

ಮೂಗುಗಳು ಸೌಂದರ್ಯಸಾಧಕಗಳಾಗದೆ ಖರ್ಚು ತಗುಲುವ ವಸ್ತುಗಳೂ ಆಗಬಹುದು. Tycho Brahe ಎಂಬಾತನು ಕತ್ತಿವರಸೆ ಮಾಡುತ್ತಿದ್ದ ವೇಳೆಯಲ್ಲಿ ತನ್ನ ಮೂಗಿನ ತುದಿಯನ್ನು ಕಳೆದುಕೊಂಡ. ಆತ ಬೇರೊಂದು ಚಿನ್ನದ ಮೂಗನ್ನು ಮಾಡಿಸಿ ಒಂದು ಬಗೆಯ ಅಂಟು (Glue) ಅದರಿಂದ ತನ್ನ ಮುಖಕ್ಕೆ ಅಂಟಿಸಿಕೊಂಡನಂತೆ. ಅಮೆರಿಕದ Pierpoint Morganನಿಗೆ ಮೂಗಿನ ಮೇಲೆ ಅಸಹ್ಯವಾದ ದುರ್ಮಾಂಸ ಬೆಳೆಯುತ್ತಿತ್ತಂತೆ. ಅದನ್ನು ಹೋಗಲಾಡಿಸುವುದಕ್ಕೆ ಆತ ವಿಶ್ವಪ್ರಯತ್ನವನ್ನೇ ಮಾಡಿದ. ಆದರೆ ಮೂಗು ತನ್ನ ಬಂಧುವನ್ನು ಬಿಟ್ಟುಕೊಡಲಿಲ್ಲ! ನಮ್ಮವರೇ ಎಷ್ಟು ಮಂದಿ ಮೂಗಿನ ಚಿಕಿತ್ಸೆಗೆ ಪರದೇಶಗಳಿಗೆ ಹೋಗಿಲ್ಲ? ಅವರ ಕಷ್ಟ ಅವರಿಗೇ ಗೊತ್ತು. ಅಷ್ಟೇಕೆ, ನಿಮ್ಮ ಮೂಗಿನ ಮೇಲಿನ ಮಡವೆ?

ನಿಮ್ಮ ಮೂಗಿನ ಅಳತೆ ಆಕೃತಿ ಮುಖದ ಸೌಂದರ್ಯವನ್ನು ಕೆಡಿಸುತ್ತಿದೆಯೇನು? ಚಿಂತೆಯಿಲ್ಲ. ವಿಜ್ಞಾನವು ಬಹುಮಟ್ಟಿಗೆ ಸಂಪೂರ್ಣವಾಗಿ ಹೊಸದಾದ ಮೂಗನ್ನೇ ಕೊಡಬಲ್ಲದು. ಪ್ರಾಸಂಗಿಕವಾಗಿ, ಮೂಗನ್ನು 'Plastic Surgery' ಯಿಂದ ಮಾರ್ಪಡಿಸುವುದು ಹೊಸದೇನೂ ಅಲ್ಲ. ನಮ್ಮವರು ಅದನ್ನು ಮೂರು ಸಾವಿರ ವರ್ಷಗಳಿಂದಲೂ ಅಭ್ಯಾಸಿಸುತ್ತಿದ್ದರಂತೆ. ಹದಿನೈದನೆಯ ಶತಮಾನದ ಇಟಲಿಯ ವೈದ್ಯನೊಬ್ಬನು ತೋಳಿನ ಚರ್ಮದಿಂದ—ಹಿಂದೂ ರೀತಿಯನ್ನು ಅನುಸರಿಸಿ—ಹೊಸ ಮೂಗನ್ನೇ ರಚಿಸುತ್ತಿದ್ದ. ಆದರೆ ಇಟಲಿಯ ಮತ್ತೊಬ್ಬ ವೈದ್ಯ ಹಳೆಯ ಮೂಗನ್ನು ಉತ್ತಮ ಪಡಿಸುವುದು, ಹೊಸದನ್ನು ರಚಿಸುವುದು, ಇತ್ಯಾದಿ ಮಾಡಿದುದರಿಂದ ಆತನನ್ನು ಸರ್ವರಿಗೂ ವಿಾಸಲಾಗಿದ್ದ ಸ್ಮಶಾನದಲ್ಲಿ ಸಮಾಧಿ ಮಾಡಬಾರದೆಂದು ನಿಬಂಧನೆ ಹಾಕಿದರು. ಕಾರಣ ಗೊತ್ತೆ? ಜನ, ಆತ ಪಿಶಾಚಿಯ ಶಕ್ತಿಯಿಂದ ಈ ಕೆಲಸವನ್ನು ಮಾಡುತ್ತಿರುವನೆಂದು ತಿಳಿದರು!

ಬನ್ನೂರ ಬಳಿಯ ಸೋಮನಾಥಪುರದ ದೇವಾಲಯದ ವಿಗ್ರಹವೊಂದ

ರಲ್ಲಿನ ಮೂಗು ಮುಖದ ಮೂರನೇ ಒಂದರಷ್ಟಿದೆ. ಅದು ಅಷ್ಟಿರಬೇಕೆಂದು ಶಿಲ್ಪಿಯ ಅಭಿಪ್ರಾಯ. ಆದರೆ ಅದೇ ಶಿಲ್ಪಿ—ಆತ ಯಾರೇ ಆಗಿರಲಿ—ಎಲ್ಲ ವಿಗ್ರಹದ ಮೂಗನ್ನೂ ಅದೇ ರೀತಿಯಲ್ಲಿ ರೂಪಿಸಿಲ್ಲ. ಮೂಗು ಒಂದೇ ಬಗೆಯದಾದರೆ ಮುಖದ ಭಾವವೂ ಒಂದೇ ಆಗುತ್ತದೆಂದು ಅರಿತ ಆ ಶಿಲ್ಪಿ ಮೂಗುಗಳನ್ನು ಬದಲಾಯಿಸಿ, ಮೂರ್ತಿಗಳನ್ನು ಬದಲಾಯಿಸಿದ್ದಾನೆ. ಮೂಗಿನ ಮಹತ್ತ್ವ ಆತ ಅರಿತವ! ಆದುದರಿಂದ, ಮೂಗು ಎರಡು ಮುಖಗಳನ್ನು, ಅರ್ಥಾತ್ ಎರಡು ವ್ಯಕ್ತಿತ್ವಗಳನ್ನು ವ್ಯತ್ಯಾಸಿಸುವ ಒಂದು ಸಾಧನ ಮಾನವನಿಗೆ ಮುಖದ ಮೇಲೆ ಮೂಗೇ ಇಲ್ಲವಾಗಿದ್ದರೊ? ಆಗ ನಾನು ನೀವಾಗುತ್ತಿದ್ದೆ! ನೀವು ನಾನಾಗುತ್ತಿದ್ದಿರಿ! ಅಲ್ಲವೆ? ನನ್ನ ಮೂಗಿನಿಂದಾಗಿ ನಾನು ನಾನಾಗಿದ್ದೇನೆ! ಮೂಗಿನಿಂದ ಬದುಕಬೇಕಾಗಿದೆ, ನಾವು. ಹೌದು, ಮೂಗಿಲ್ಲದಿದ್ದರೆ ಉಸಿರಾಡುತ್ತಿದ್ದೆವೆ? ಓಹೋ! ನೀವು ಬಾಯಲ್ಲಿ ಉಸಿರಾಡುವವರೋ! ಬಾಯಿ ಬಿಟ್ಟರೆ ಬಣ್ಣಗೇಡಾಗಿರುವ ಈ ಕಾಲದಲ್ಲಿ ಬಾಯಲ್ಲಿ ಉಸಿರಾಡಿದ್ದೇ ಆದರೆ ಬುದ್ಧಿಗೇಡೂ ಆದೀತು. ಎಚ್ಚರಿಕೆ!

ಮೂಗುಗಳಲ್ಲಿ ಅನೇಕ ವಿಧಗಳುಂಟು. ಪ್ರಾಣಿಗಳ ಮೂಗೆಲ್ಲವೂ ಏಕ ರೀತಿಯಲ್ಲಿರುವುದರಿಂದ ಅದರ ವಿವಿಧತೆಯಲ್ಲಿ ವೈಶಿಷ್ಟ್ಯವೇನೂ ಅಷ್ಟಾಗಿ ಇಲ್ಲ. ಮಾನವನ ಮೂಗುಗಳಲ್ಲಿ ಅನೇಕ ರೀತಿಯವಿದ್ದರೂ ಹೆಚ್ಚಾಗಿ ಕಾಣುವುದು ಕೆಲವೇ ಬಗೆಯವು. ಅವು, ಅಗಲವಾದ ಮೊಟಕಾದ ಮೂಗು, ಉದ್ದವಾದ ಮೂಗು, ಮತ್ತು ಗಿಣಿಮೂಗು. ಅಗಲವಾದ ಮೊಟಕಾದ ಮೂಗನ್ನುಳ್ಳ ಗುಂಡು ಮುಖವು "Bulldog"ನ ಮುಖದಂತಿರುವುದಲ್ಲವೆ? ಈ ಮೊಟಕು ಮೂಗಿನವರನೇಕರು ವಿಲಕ್ಷಣವಂತರಾಗಿದ್ದರೂ ಲಕ್ಷಣವಾಗಿರುವವರು ಇಲ್ಲದೇ ಇಲ್ಲ. ಸಿನಿಮಾತಾರೆ ನಿಮ್ಮಿಯ ನಾಸಿಕವನ್ನು ನೋಡಿರುವಿರಾ? ಆಕೆಯ ಮೂಗೇ ಆಕೆಯನ್ನು ತಾರಾಪಟ್ಟಕ್ಕೇರಿಸಿದೆಯೆಂದು ನನಗನ್ನಿಸುತ್ತದೆ. ಆದರೆ, ಆಕೆ ಏನನ್ನುವಳೊ? ಆ ಮೂಗಿಗೆ ಆ ಮುಖವೆ ಸರಿಯಲ್ಲವೆ? ಮೂಗಿನಂತೆ ಮುಖವಲ್ಲವೆ? ಗಿಣಿಮೂಗು ಗಿಣಿಯ ಕೊಕ್ಕಿನಂತಿರುವುದರಿಂದ ಅದಕ್ಕೆ ಆ ಹೆಸರು ಅನ್ವರ್ಥವಾಗಿದೆ. ಗಿಣಿ ಮೂಗುಳ್ಳವರು ಐಶ್ವರ್ಯವಂತರಾಗುವರಂತೆ. ಉದ್ದಮೂಗುಳ್ಳವರೋ?

ಇಂದಿನ ವಿಶ್ವದ "Big four powers" ನ ಜನರು 'Big power'

ಪಡೆದಿರೋದಲ್ಲದೆ 'Big nose' ಅನ್ನೂ ಪಡೆದಿದ್ದಾರೆಂದು ಕಾಣುತ್ತೆ. ಎಲ್ಲರ ಮೂಗನ್ನೂ ನೋಡಿರುವ ನಾನು ರಷ್ಯನರ ಮೂಗನ್ನು ಮಾತ್ರ ನೋಡಿಲ್ಲ. ಏಕೆನ್ನುವಿರೋ, ಅವರು "Men behind the Iron curtain." ಏನೋ Plastic ದೋ, ಮತ್ತೊಂದೋ curtain ಆದರೆ ಹೇಗೋ ಸ್ವಲ್ಪ ನುಸಿದು ಕೊಂಡು ಹೋಗಿ ಅವರ 'nose' ನ ನೋಡಿಕೊಂಡು ಬರಬಹುದಿತ್ತು. ಆದರೆ Iron curtain! ನಾವು ಒಳಗೆ ಹೋಗಿ ನೋಡುವ ಹಾಗಿಲ್ಲ. ಅಲ್ಲದೆ "ಮೂಗು ಮುರಿದಂತೆ" ಮಾತಾಡಿ ಈಚೆಗೆ ಬರುವ ಹಾಗೂ ಇಲ್ಲ. ಯಾವ ಹೊತ್ತಿನಲ್ಲಿ ಯಾವ Bomb ಬೀಳುತ್ತೊ ಈ ಬಡವನ ಮೇಲೆ ಎನ್ನುವ ಭಯ ಬೇರೆ. ಮಿಕ್ಕ ಮೂವರ ಮೂಗೂ ಉದ್ದವಾಗಿರುವುದರಿಂದ ಇವರದೂ ಅಂತೆಯೇ ಇರಬೇಕೆಂದು ಊಹಿಸಬಹುದು. ಯಾವ ದೇಶದ ಜನರ ಮೂಗು ಉದ್ದವಾಗಿರುವುದೋ ಆ ದೇಶ ಮುಂದುವರಿಯುವುದರಲ್ಲಿ ಸಂಶಯವಿಲ್ಲ. ಈ ಮಾತಿನಲ್ಲಿ ಸತ್ಯವಿದೆ, ಸತ್ಯವಿದೆ. 'Big four Powers' ತಮ್ಮ ಮೂಗಿ ನಿಂದಲೇ 'Big' ಆದರೆಂದು ನನ್ನ ಅಭಿಪ್ರಾಯ. ಚೈನ, ಆಫ್ರಿಕ, ಜಪಾನ್ ಹಾಗೂ ಭಾರತದವರ ಮೂಗು ಉದ್ದವಾಗಿಲ್ಲದ ಪ್ರಯುಕ್ತ ಅವರ ದೇಶವೂ ಮುಂದುವರಿದಿಲ್ಲ. ಉದ್ದಮೂಗುಳ್ಳವರು ದೃಢವಂತರು, ನಿಷ್ಠಾವಂತರು. ಹಿಡಿದ ಕಾರ್ಯವನ್ನು ಮುಗಿಸಲೇಬೇಕೆಂದು ಹಟತೊಟ್ಟು ಕಾರ್ಯರಂಗಕ್ಕಿಳಿಯು ವವರು ಉದ್ದ ಮೂಗಿನವರು. ನಮ್ಮ ದೇಶ ಪ್ರಗತಿಯ ಪಥದಲ್ಲಿ ಹೋಗ ಬೇಕಾದರೆ ನಮ್ಮವರ ಮೂಗೂ ಮುಂದಿರಬೇಕು. ಆದುದರಿಂದ ಇಂದೇ ಬೇಡಿಯೋ, ಕಾಡಿಯೋ, ಕೃತಕವಾದದ್ದೊ, ನೈಜವಾದದ್ದೊ ಮೂಗನ್ನು, ಉದ್ದವಾದ ಮೂಗನ್ನು ಪಡೆಯಲು ಪ್ರಯತ್ನಿಸುವಿರಾ? ಉದ್ದ ಮೂಗುಳ್ಳ ವರು ಉನ್ನತ ಮಟ್ಟದಲ್ಲಿರಬಲ್ಲರು. ಅವರ ಕಾರ್ಯದಲ್ಲಿ ದೃಢತೆ ಇರುವುದು; ಅವರ ಮೂಗು ಉದ್ದವಿರುವುದು. ಯಾವ ವಿಜ್ಞಾನಿಯ ಮೂಗು ಮೊಟಕು? ಯಾವ ಚರಿತ್ರಕಾರನ ಮೂಗು ಮೊಟಕು? ಮೊಟಕು ಮೂಗುಳ್ಳ ಮಹತ್ತ್ವದ ವ್ಯಕ್ತಿ ಯಾರುಂಟು? ಮಹಾತ್ಮರೆಲ್ಲ ಉದ್ದಮೂಗಿನವರೇ. ವಿಶ್ವವಿಖ್ಯಾತರಾದ ಟಾಗೂರ್, ಎಮರ್ಸನ್, ಬೈರನ್, ಷಾ, ನೆಪೋಲಿಯನ್ ಇವರೆಲ್ಲರ ಮೂಗು ಮೊಟಕೆ? ಅವರು ಯಶಸ್ವಿಯಾಗಿ ಕಾರ್ಯ ಸಾಧಿಸಿಲ್ಲವೆ? ಅವರ ಮೂಗು ಉದ್ದವಲ್ಲವೆ? ನಮ್ಮ ನೆಹರೂರವರನ್ನೇ ನೋಡಿ—ಅವರ ಕಾರ್ಯಸಾಧನೆ

ಎಂತಹದು! ಅವರ ಮೂಗು ಎಂತಹದು! ಅಷ್ಟೇಕೆ, ನನ್ನನ್ನೇ ನೋಡಿ; ಈಗ ನಾನು ಹಿಡಿದಿದ್ದ ಕಾರ್ಯವನ್ನು—ಎಸ್ಸೆ ಬರೆಯುವುದನ್ನು—ಯಶಸ್ವಿಯಾಗಿಯೇ (?) ಸಾಧಿಸಿಲ್ಲವೆ? ನನ್ನ ಮೂಗು . . . !

ಎಸ್. ಸುಬ್ರಹ್ಮಣ್ಯಂ

## ಒಬ್ಬನೇ ದೈವ

ಒಬ್ಬನಲ್ಲದೆ ಜಗಕೆ ಇಬ್ಬರುಂಟೇ ಮತ್ತೆ?
ಒಬ್ಬ ಸರ್ವಜ್ಞಕರ್ತನೀ—ಜಗಕೆಲ್ಲ
ಒಬ್ಬನೇ ದೈವ ಸರ್ವಜ್ಞ.

ಆ ದೇವ ಈ ದೇವ ಮಾದೇವನೆನಬೇಡ
ಆ ದೇವರ ದೇವ ಭುವನದಾ ಪ್ರಾಣಿಗಳಿ-
ಗಾದವನೆ ದೇವ ಸರ್ವಜ್ಞ.

ಚಿತ್ರವನು ನವಿಲೊಳು ವಿಚಿತ್ರವನು ಗಗನದೊಳು
ಪತ್ರ ಪುಷ್ಪಗಳ ವಿವಿಧ ವರ್ಣಗಳಿಂದ
ಚಿತ್ರಿಸಿದರಾರು ಸರ್ವಜ್ಞ?

ಇಂಗಿನೊಳು ನಾತವನು ತೆಂಗಿನೊಳಗೆಳೆನೀರ
ಭೃಂಗ ಕೋಕಿಲೆಯ ಕಂಠದೊಳು ಗಾಯನವ
ತುಂಬಿದವರಾರು ಸರ್ವಜ್ಞ?

ಎನ್ನ ಮನಸಿಗೆ ನೆನಹ ಪನ್ನಗಧರ ಕೊಟ್ಟ
ಬಿನ್ನಣದಿಂದ ಸ್ತುತಿಗೈದು ಪೊಗಳುವೆ
ಚೆನ್ನಮೂರುತಿಯ ಸರ್ವಜ್ಞ.

# ನಾನು ಕಂಡಿರುವ ಕಣ್ಣುಗಳು

ನಾನು ಹೋದೆಡೆಯೆಲ್ಲ ನನ್ನ ಕಣ್ಣುಗಳನ್ನೇ ಗಮನಿಸಿ ನನ್ನನ್ನೂ ಎವೆಯಿಕ್ಕದೆ ನೋಡುವವರು ಬಹುಮಂದಿ ಇದ್ದಾರೆ. ಹಾಗೆ ದಿಟ್ಟಿಸಿ ನೋಡಿದ ಕೆಲವರನ್ನು ವಿಚಾರಿಸಿದ್ದರಿಂದ ನನಗೆ ತಿಳಿದುಬಂದಿದೆ, ನನ್ನ ಕಣ್ಣುಗಳಲ್ಲಿ ಅದೆಂತಹದೊ ಅಪೂರ್ವತೆ ಇದೆಯೆಂದು. ಆದರೆ ನನ್ನ ಅಸಾಧಾರಣ ಕಣ್ಣುಗಳ ಅದ್ವಿತೀಯತೆಯನ್ನು ನನಗೆ ಅರ್ಥವಾಗುವಂತೆ ತಿಳಿಯಹೇಳುವವರು ಯಾರೂ ಇಲ್ಲ. ನನ್ನದೇನು ಹುಚ್ಚನ ಕಣ್ಣುಗಳೆ? ದಡ್ಡನ ಕಣ್ಣುಗಳೆ? ಪ್ರತಿಭಾವಂತ ಕವಿಯ ಕಣ್ಣುಗಳೆ? ಹಿಂದೆಂದೂ ಹುಟ್ಟದ, ಮುಂದೆಂದೋ ಹುಟ್ಟಬಹುದಾದ ವಿಲಕ್ಷಣ ಮೃಗದ ಕಣ್ಣುಗಳೆ? ನನ್ನ ಕಣ್ಣು ಎಂಥವು?

ಅಂತೂ ನನ್ನ ಕಣ್ಣುಗಳ ಅದ್ವಿತೀಯತೆಯನ್ನು, ಅಸಾಧಾರಣ ಸ್ವರೂಪವನ್ನು ಅಪೂರ್ವದೃಷ್ಟಿಯನ್ನು ನಾನೇ ಅರಿಯಲಾರೆ. ಆದ್ದರಿಂದ, ಎಲ್ಲಿಯೇ ಹೋಗಲಿ, ನಾನು ಗಮನಿಸಿ ವೀಕ್ಷಿಸುವುದು ನನ್ನ ಕಣ್ಣಿಗೆ ಬೀಳುವ ಇತರ ಜನರ ಕಣ್ಣುಗಳನ್ನೇ. ಆದರೆ ನನ್ನ ಭಾವನಾಪ್ರಪಂಚದ ಅಧಿದೇವತೆಯ ಎರಡು ಕಣ್ಣುಗಳನ್ನು, ನನ್ನ ಕಣ್ಣುಗಳ ಪ್ರತಿರೂಪಿಗಳಾದ ಕಣ್ಣುಗಳನ್ನು ಇದುವರೆಗೂ ನಾನು ಕಂಡಿಲ್ಲ. ಸಾವಿರಾರು ಕಣ್ಣುಗಳನ್ನು, ವಿಧವಿಧದ ಕಣ್ಣುಗಳನ್ನು ಕಂಡಿದ್ದೇನೆ: 'ಬೆಕ್ಕಿನ ಕಣ್ಣು'ಗಳು, 'ಚೀಮೆಕಣ್ಣು'ಗಳು, ಕುಳಿಯೊಳಗೇ ಹೂತುಹೋದ ಕಣ್ಣುಗಳು, ಕುಳಿಯಿಂದ ಹೊರಚಾಚಿದ ಕಣ್ಣುಗಳು, ಹೆಂಡ ಕುಡಿದವರ ಕೆಂಪು ಕಣ್ಣುಗಳು, ಜ್ವರ ಬಂದವರ ಕೆಂಪು ಕಣ್ಣುಗಳು, ಕಾಮಾಲೆ ರೋಗಿಗಳ ರಕ್ತಹೀನ ಕಣ್ಣುಗಳು—ಹೀಗೆ ಬಗೆ ಬಗೆಯ ಕಣ್ಣುಗಳನ್ನು ನೋಡಿದ್ದೇನೆ.

ಇಷ್ಟೂ ಜೀವಂತ ಕಣ್ಣುಗಳ ಮಾತಾಯಿತು. ಜೀವಹೀನವಾದ, ದೃಷ್ಟಿಹೀನವಾದ ಕಣ್ಣುಗಳನ್ನು ಕೂಡ ಕಂಡಿದ್ದೇನೆ. ನಾನು ಕಂಡಿರುವ ಕುರುಡು ಕಣ್ಣುಗಳ ಪೈಕಿ ಒಬ್ಬ ಭಿಕ್ಷುಕನನ್ನು ನೋಡಿದ ಸಂದರ್ಭದ ಚಿತ್ರ ನನ್ನ ಮನಸ್ಸಿನಲ್ಲಿ ಅಚ್ಚಳಿಯದೆ ನಿಂತಿದೆ. ಕುಳಿತಿದ್ದದ್ದು 'ಬಸ್'ನಲ್ಲಿ. ಕೇಳಿದ್ದು: 'ಕುರುಡ, ಸ್ವಾಮೀ, ಕುರುಡನಿಗೆ ಏನಾದರೂ ಕೊಡಿ.' ಕಂಡದ್ದು: ಶಬ್ದ ಹುಟ್ಟಿದ ಸ್ಥಳದಲ್ಲೆ ನಿಂತಿದ್ದ ಕುರುಡು ಹುಡುಗನ ಕಣ್ಣುಗಳ ಜೋಡಿ

ಯೊಂದನ್ನು . . . . ಅಲ್ಲ, ಜೋಡಿಯಲ್ಲ, ಇಜ್ಜೋಡಿ ಕಣ್ಣುಗಳನ್ನು, ದೃಷ್ಟಿಶಕ್ತಿ ಇಂಗಿಹೋಗಿದ್ದ ಇಜ್ಜೋಡಿ ಕಣ್ಣುಗಳನ್ನು. ಎಡಗಣ್ಣು 'ಇಸ್ತ್ರಿ' ಮಾಡಿ ಗುಂಡಿ ಹಾಕದೆ ಬಿಟ್ಟ ಕೋಟಿನ 'ಕಾಜ'ದಂತಿತ್ತು. ಕಣ್ಣಾಲಿ ಇತ್ತೋ ಇಲ್ಲವೋ ತಿಳಿಯದು. ಬಲಗಣ್ಣು ಹಣೆಗಿಂತಲೂ ಮುಂದಕ್ಕೆ ಉಬ್ಬಿತ್ತು. ಅರ್ಧ ಹಣ್ಣಾಗಿ ಹಾಗೆಯೇ ಉಳಿದು ಕೊಳೆಯಲು ಪ್ರಾರಂಭಿಸಿರುವ ಟೊಮ್ಯಾಟೊ ಕಾಯಿ ಬಲಗಣ್ಣ ಕುಳಿಯಿಂದ ನುಗ್ಗಿ ಹೊರಬರಲು ಯತ್ನಿಸು ತ್ತಿದ್ದಂತೆ ಕಂಡಿತು. ಬಹಳವಾಗಿ ಮುದುರಿಕೊಂಡ ರೆಪ್ಪೆಗಳು ಕಾಣಿಸದಂತೆ ಕಣ್ಣಾಲಿ ಹೊರಚಾಚಿತ್ತು.

ಈ ಅಸಹ್ಯ ದೃಶ್ಯದ ವರ್ಣನೆ ಸಾಕು. ಭಾವಚಿತ್ರಗಳಲ್ಲೂ ಇತರ ಚಿತ್ರ ಗಳಲ್ಲೂ ಅನೇಕ ಪ್ರಸಿದ್ಧ ವ್ಯಕ್ತಿಗಳ ಕಣ್ಣುಗಳನ್ನು ನೋಡಿದ್ದೇನೆ. ಅನೇಕ ರೇಖಾಚಿತ್ರಗಳಲ್ಲಿ ಆದಿಕವಿ ಹೋಮರನ ಕಣ್ಣುಗಳನ್ನು ಕಂಡಿದ್ದೇನೆ. ಅಂಧ ನಾಗುವುದಕ್ಕೆ ಮೊದಲಿನ ಮಿಲ್ಟನ್ ಮಹಾಕವಿಯ ಚಿತ್ರದಲ್ಲಿ ಆತನ ಕಣ್ಣುಗಳು ಸೂಚಿಸುವ ಅಲೌಕಿಕ ಪ್ರತಿಭೆಯನ್ನು ಗುರುತಿಸಿದ್ದೇನೆ. ಅತ್ಯಂತ ಕೃಶ ಶರೀರಿ ಯಾದ ಪೋಪ್‌ನ ಹೊಳೆಯುವ ಕಣ್ಣುಗಳು ನನ್ನ ಬಳಿಯಿರುವ ಆತನ ಮುಖ ಚಿತ್ರದಲ್ಲಿ ಎದ್ದು ಕಾಣುತ್ತವೆ. ಸೆಯಿಂಟ್ಸ್‌ಬರಿಯ ಭಾವಚಿತ್ರವನ್ನು ನೋಡಿ ಬಹಳ ದಿನಗಳಾಗಿಲ್ಲ. ಆತನ ಕಣ್ಣುಗಳನ್ನು ನೋಡಿದ ಕೂಡಲೆ ಹೇಳಬಹುದು: ಆತನೊಬ್ಬ ಉದ್ದಾಮ ಪಂಡಿತನಾಗಿರಬೇಕೆಂದು. ಆತನ ಬುದ್ಧಿಶಕ್ತಿ ಮೇಧಾ ಶಕ್ತಿಗಳು ಕಣ್ಣುಗಳಿಂದ ಹೊರಸೂಸುತ್ತಿವೆ.

ಆತನ ಭಾವಚಿತ್ರವನ್ನು ಕೆಲವು ಮಿತ್ರರಿಗೆ ತೋರಿಸಿದಾಗ ಅವರು ನನ್ನ ಕಣ್ಣುಗಳೂ ಸೆಯಿಂಟ್ಸ್‌ಬರಿಯ ಕಣ್ಣುಗಳನ್ನು ಬಹಳ ಮಟ್ಟಿಗೆ ಹೋಲುತ್ತವೆ ಎಂದರು. ಸೆಯಿಂಟ್ಸ್‌ಬರಿ ಬರೆದ ಸಾಹಿತ್ಯ ವಿಮರ್ಶೆಯ ಗ್ರಂಥಗಳನ್ನು ಓದಲು ಮೊದಲುಮಾಡಿದ ದಿನದಿಂದ ನಾನೂ ಆತನಂತೆಯೇ ಉತ್ತಮ ಪಂಡಿತನೂ ವಿಮರ್ಶಕನೂ ಆಗಬೇಕೆಂಬ ಆಸೆ ನನಗುಂಟಾಗಿದೆ. ಸೆಯಿಂಟ್ಸ್‌ಬರಿ ತೀರಿ ಕೊಂಡದ್ದು ೧೯೩೩ರಲ್ಲಿ. ೧೯೬೩ರ ಅಥವಾ ೧೯೭೩ ರ ವೇಳೆಗಾದರೂ ನಾನೇ ಸೆಯಿಂಟ್ಸ್‌ಬರಿಯ ಪುನರಾವತಾರವಾಗಿ ದೊಡ್ಡ ದೊಡ್ಡ ವಿಮರ್ಶಾತ್ಮಕ ಗ್ರಂಥ ಗಳನ್ನು ಬರೆಯಬೇಕೆಂಬುದು ನನ್ನ ಹುಚ್ಚು ಹಂಬಲ.

ಆದರೆ ನನಗಿಷ್ಟಬಂದಂತೆ ನಾನು ವ್ಯಾಸಂಗ ಮಾಡಲಾರೆ. ಹುಟ್ಟಿ

ದಂದಿನಿಂದಲೂ ಶ್ವಾಸಕೋಶಕ್ಕೆ ಸಂಬಂಧಪಟ್ಟ ರೋಗಗಳಿಂದ ನರಳುತ್ತಿರುವ ನನ್ನನ್ನು ಕಂಡರೆ ನಮ್ಮ ತಾಯಿ ಕರುಣಾಮಯಿಯಾಗುತ್ತಾರೆ, ವಾತ್ಸಲ್ಯ ಮಯಿಯಾಗುತ್ತಾರೆ. ರಾತ್ರಿ ಹನ್ನೆರಡು ಗಂಟೆ ಆದರೂ ನಾನು ಓದುತ್ತ ಕುಳಿತಿರುವುದನ್ನು ಕಂಡರೆ ಅವರು ಎದ್ದು ನನ್ನ ಹತ್ತಿರ ಬರುತ್ತಾರೆ. ಹಣೆ ಮುಟ್ಟಿ ನೋಡುತ್ತ, ಮುಖವನ್ನು ದಿಟ್ಟಿಸಿ ನೋಡಿ, 'ಅಲ್ವೊ ಮಗೂ, ತಲೆ ಕಾದು ಬಿಸಿಯಾಗಿದ್ರೂ, ಕಣ್ ಕೆಂಪಗಾದ್ರೂ ನಿನ್ನ ಓದು ಮುಗಿಯೊ ಲ್ವೇನೋ? ಸಾಕು ಸಾಕು ಓದಿದ್ದು. ಶೀತ ಹತ್ತಿ ಗಂಟಲಲ್ಲಿ ಸಂಗೀತ ಷುರು ವಾದ್ರೆ, ನಿನ್ನಿಂದ ನಮಗೆಲ್ಲ ಸಂಕಟ. ನಿಂಗೂ ನಿದ್ದೆ ಇಲ್ಲ, ನಮ್ಗೂ ಇಲ್ದ ಹಾಗಾಗುತ್ತೆ' ಎನ್ನುತ್ತ ದೀಪ ಆರಿಸಿ ಹೋಗುತ್ತಾರೆ. ಆಮೇಲೆ ಒಂದೆರಡು ನಿಮಿಷಗಳೊಳಗಾಗಿ 'ಮೆಯಿನ್ ಸ್ವಿಚ್' ಆರಿಸಿದ ಶಬ್ದ ಕೇಳಿಬರುವುದು. ನನ್ನ ಅಂದಿನ ಓದು ಕೊನೆಗಾಣುವುದು.

ನನ್ನ ತಾಯಿಯ ಕಣ್ಣುಗಳು 'ಬೆಕ್ಕಿನ ಕಣ್ಣುಗಳು. ಆದರೆ ಬೆಕ್ಕಿನ ಕಣ್ಣುಗಳಂತೆ ಭಯವನ್ನು ಹುಟ್ಟಿಸುವ ದೃಷ್ಟಿಯನ್ನು ಬೀರುವ ಕಣ್ಣುಗಳೇನಲ್ಲ. ದುಃಖಿತರಿಗೆ ಸಾಂತ್ವನೆಯನ್ನೀಯಬಲ್ಲ ಕಣ್ಣುಗಳು ನನ್ನ ಅಮ್ಮನವು. ಅವು ತಾನು ಕಂಡವರಿಗೆಲ್ಲ ಶಾಂತಿಯನ್ನು ಒದಗಿಸುವುವು. ನನ್ನನ್ನು ಗಮನಿಸಿ ನೋಡಿದಾಗ, ನನ್ನ ವಿಷಯವನ್ನು ಆಲೋಚಿಸಿದಾಗ ಮಾತ್ರ ಆಕೆಯ ಕಣ್ಣು ಗಳು ತೇವಗೊಳ್ಳುವುವು.

ನಮ್ಮ ಅಜ್ಜಿಯದು (ಅಜ್ಜಿ ಎಂದರೆ ತಾಯಿಯ ತಾಯಿ) ಮುದುಕಿ ಯಾದರೂ ನಗುನಗುತ್ತ ಕಾಲ ಕಳೆಯುವ ಸ್ವಭಾವ. ಅವರ ಕಣ್ಣಾಲಿಗಳು ಕುಳಿಗಳಿಂದ ಹೊರಚಾಚಿವೆ. ಅವರು ನಕ್ಕಾಗ ಅವರ ಮುಖವೆಲ್ಲ, ಅವರ ಕಣ್ಣುಗಳು ಕೂಡ, ನಗುತ್ತವೆ. ಆದರೆ ನಗುವಿನ ಅಲೆ ಇಳಿಯುತ್ತಹೋದಂತೆ ಯಾವುದೋ ವಿಲಕ್ಷಣ ಕಾಂತಿಯೊಂದು ಅವರ ಕಣ್ಣುಗಳಲ್ಲಿ ಮಿಂಚಿ ಮಾಯ ವಾಗುವುದನ್ನು ಕಂಡಾಗ ತಿರುಕನ ಬಲಗಣ್ಣು ನನಗೆ ಮಾತ್ರ ಗೋಚರಿಸು ತ್ತದೆ. ಅಜ್ಜಿಯ ದೃಷ್ಟಿಶಕ್ತಿ ಇನ್ನೂ ಬಹಳ ಕಾಲ ಹೀಗೆಯೆ ಉಳಿಯಲಾರದು ಎಂಬ ಶಂಕೆ ನನಗೆ ಭಯವನ್ನುಂಟುಮಾಡುತ್ತದೆ.

ಅಜ್ಜನ ಕಣ್ಣುಗಳು 'ಚೀಮೆಕಣ್ಣು'ಗಳು. 'ಬಸ್ ಸ್ಟ್ಯಾಂಡ್' ಕುರುಡನ ಎಡಗಣ್ಣಿನ ಜೊತೆಯಂತಿದೆ ಅವರ ಕಣ್ಣುಗಳು. ಶಾಂತಂ ಪಾಪಂ! ಅಜ್ಜನ

ದೃಷ್ಟಿ ಇದುವರೆಗೆ ಎಂದೂ ಮಂದವಾಗಿದ್ದಿಲ್ಲವಂತೆ. ಜೀವನಪರ್ಯಂತ ಅವರ ದೃಷ್ಟಿ ಮಂದವಾಗದೆ ಉಳಿಯಲಿ ಎಂದು ನಾನು ಭಗವಂತನನ್ನು ಪ್ರಾರ್ಥಿಸುತ್ತೇನೆ. ಬಹಳ ವರ್ಷಗಳ ಹಿಂದೆ ಅಜ್ಜ ನನಗೆ ಕಥೆ ಹೇಳುತ್ತಿದ್ದರು. ಈಗ ನನ್ನ ತಂಗಿ ಗಂಟೆಗಟ್ಟಲೆ ಕುಳಿತು ನನ್ನ ಹೊಸ ಕಥೆಗಳನ್ನು ಕೇಳುವಷ್ಟೇ ಆಸಕ್ತಿಯಿಂದ ಅವರ ಹಳೆಯ ಕಥೆಗಳನ್ನೂ ಕೇಳುತ್ತಾಳೆ. ಓದಿ ಬರೆದು ಬೇಸರಗೊಂಡಾಗ ನಾನೂ ಅವರ ಕಥೆ ಕೇಳುತ್ತೇನೆ. ಒಬ್ಬ ರಾಜನ ಕಥೆ ಹೇಳುತ್ತ, 'ಹೈ ಸರ ಸರ ರಂಗ ಮಿಟ ಮಿಟ ತಟ ತಟ ತಟ ಕೊಟ ಕೊಟ ಕೊಟ' ಎಂದು ಹಾಡಲುಪಕ್ರಮಿಸುತ್ತಾರೆ ನಮ್ಮಜ್ಜ. 'ಹೈಸರ . . .' ಎಂದು ಅಪ್ಸರೆಯರು ರಾಜನ ಮುಂದೆ ಕುಣಿದರಂತೆ. ಕುಣಿತ ಮುಗಿದ ಮೇಲೆ ಅವರು ರಾಜರನ್ನು ಕೇಳಿದರಂತೆ: 'ಏಮ್ ಕಾವಲಾ?' (ಕನ್ನಡದಲ್ಲಿ 'ಏನು ಬೇಕು') ಎಂದು. ಕಥೆಯ ಈ ಪ್ರಸಂಗವನ್ನು ವರ್ಣಿಸುವಾಗ ಅಜ್ಜನ 'ಚೀಮೆ ಕಣ್ಣು'ಗಳು ಊರಗಲವಾಗುವುವು.

ನಮ್ಮ ತಂದೆಯವರ ಕಣ್ಣುಗಳು ಸಾಧಾರಣವಾದವು. ಆದರೆ ಹೆಚ್ಚು ಕಡಮೆ ಯಾವಾಗಲೂ ಅವು ಕೆಂಪಾಗಿಯೇ ಇರುತ್ತವೆ. ಅವರು ಆ ಕೆಂಬಣ್ಣದ ಛಾಯೆಯನ್ನು ಹೋಗಲಾಡಿಸಿಕೊಳ್ಳಲು ಈ ನಡುವೆ ಕನ್ನಡಕ ಉಪಯೋಗಿಸುತ್ತಾರೆ. ಅವರು ತಮ್ಮ ಪುಸ್ತಕಗಳನ್ನು ಸ್ವಲ್ಪ ಮಟ್ಟಿಗಾದರೂ ಬದಿಗಿರಿಸಿ ತಮ್ಮ ಓದನ್ನು ಕಡಮೆ ಮಾಡುವವರೆಗೂ ಅವರ ಕಣ್ಣುಗಳ ಬಣ್ಣ ಸರಿಹೋಗದೆಂದು ನನಗೆನ್ನಿಸುತ್ತದೆ. ಮನೆಯಲ್ಲಿ ಇರುವಾಗ ಎಡೆಬಿಡದೆ ಓದುತ್ತಾರೆ. 'ಆಫೀಸ್'ನಲ್ಲಿ ಕೂಡ ವಿರಾಮ ಸಿಕ್ಕಿದಾಗ ಓದುತ್ತಿರುತ್ತಾರಂತೆ. ಕಥೆ, ಕಾದಂಬರಿ, ಕವನ, ಕಾವ್ಯ, ಶಾಸ್ತ್ರ, ವಿಜ್ಞಾನ—ಈ ವಿಷಯಗಳನ್ನೊಳಗೊಂಡ ಪುಸ್ತಕ ಯಾವುದೇ ಸಿಗಲಿ, ಅದನ್ನು ತಪ್ಪದೆ ಓದುತ್ತಾರೆ.

ನನ್ನ ತಂಗಿ—ನನ್ನ ಮುದ್ದು ತಂಗಿ—ಅಷ್ಟೆಲ್ಲ ಓದಬೇಕಾಗಿಲ್ಲ. ಓದಿ ಓದಿ ಮರುಳಾದ ಕೂಚುಭಟ್ಟರಂತೆ ತಂದೆ ಅಣ್ಣ ಇರುವಾಗ ಅವಳೇಕೆ ಓದಬೇಕು? ನಕ್ಷತ್ರದಂತಿರುವ ಅವಳ ಕಣ್ಣಿನ ಕಾಂತಿ ಹೆಚ್ಚು ಓದಿನಿಂದ ಮಾಸಿ ಹೋಗದಿರಲಿ ಎಂದು ನನ್ನ ಹಾರೈಕೆ. ಚಿರಕಾಲ ಮಿನುಗುವ ನಕ್ಷತ್ರಗಳಂತೆ ಅವಳ ಕಣ್ಣುಗಳು ಎಂದೆಂದಿಗೂ ತಮ್ಮ ಹೊಳಪನ್ನು ಉಳಿಸಿಕೊಳ್ಳಲಿ. ಅವಳ ಕಣ್ಣುಗಳ ಪ್ರಕಾಶದಿಂದ ಆಕರ್ಷಿತನಾಗಿ ನಾನು ಅವಳ ಹತ್ತಿರ

ಹೋಗುತ್ತೇನೆ. ಅವಳ ಕಣ್ಣಲ್ಲಿ ಕಣ್ಣಿಟ್ಟು ನೋಡುತ್ತೇನೆ. ಆಗ, ಜಾನ್ ಡನ್ ಹಾಡಿರುವಂತೆ

My face in thine eye, thine in mine appears.

ಅವಳ ಕಣ್ಣುಗಳಲ್ಲಿ ನನ್ನ ಕಣ್ಣುಗಳನ್ನೆ, ನನ್ನ ಮುಖವನ್ನೆ ಕಾಣುತ್ತೇನೆ, ನಾನು ಕಂಡಿರುವ ಎಲ್ಲ ಜೀವಂತ ಕಣ್ಣುಗಳಲ್ಲೂ ಕಂಡಿರುವಂತೆ.

**ಕುಂಚಾಲ ಭುಜಂಗಸ್ವಾಮಿ**

## ದಾನ

ಅನ್ನವನು ಇಕ್ಕುವುದು, ನನ್ನಿಯನು ನುಡಿಯುವುದು;
ತನ್ನಂತೆ ಪರರ ಬಗೆದಡೆ—ಕೈಲಾಸ
ಬಿನ್ನಾಣವಕ್ಕು ಸರ್ವಜ್ಞ!

ಸಿರಿ ಬಂದ ಕಾಲಕ್ಕೆ ಕರೆದು ದಾನವ ಮಾಡು;
ಪರಿಣಾಮವಕ್ಕು, ಪದವಕ್ಕು, ಕೈಲಾಸ
ನೆರೆಮನೆಯೆ ಅಕ್ಕು, ಸರ್ವಜ್ಞ.

ಕೊಟ್ಟದ್ದು ತನಗೆ, ಬಚ್ಚಿಟ್ಟದ್ದು ಪರರಿಂಗೆ;
ಕೊಟ್ಟದ್ದು ಕೆಟ್ಟತೆನಬೇಡ; ಅದು ಮುಂದೆ
ಕಟ್ಟಹುದು ಬುತ್ತಿ ಸರ್ವಜ್ಞ.

ಇಕ್ಕಿದಾತನು ಉಂಡು ನಕ್ಕು ಸ್ವರ್ಗಕೆ ಹೋದ;
ಇಕ್ಕದನು ಹೋದ ನರಕಕ್ಕೆ; ಲೋಕದೊಳ-
ಗಿಕ್ಕಲೇಬೇಕು ಸರ್ವಜ್ಞ.

# ಹಣ್ಣನ್ನು ಹುಡುಕಿಕೊಂಡು

ನಾವು 'ನಡುವೆ ವಠಾರ'ದಲ್ಲಿದ್ದಾಗ ಮನೆಯ ಹಿಂಭಾಗದ ದಾಳಿಂಬೆ ಮರ ಅಂಬರಕ್ಕೆ ಮುಟ್ಟುತ್ತಿತ್ತು. ಬಿರಿದು ಬಾಯಿಬಿಟ್ಟ ಹಣ್ಣುಗಳಿಂದ ಕಾಳು ನೆಲದ ಮೇಲೆ ಚೆಲ್ಲಾಡುತ್ತಿದ್ದುವು. ಅಳಿಲುಗಳ ಗುಂಪನ್ನು ಓಡಿಸಿ, ಕಾಳು ಗಳನ್ನು ಸವಿದ ನನಗೆ ಇನ್ನಾವ ದಾಳಿಂಬೆಯೂ ರುಚಿಸದು. ನಮ್ಮದೊಂದು ದೊಡ್ಡ ಗುಂಪು. ಪ್ರೈಮರಿ ತರಗತಿಯ ನಮಗೆ ಎಲ್ಲ ಕಡೆಯಲ್ಲೂ ಸ್ವತಂತ್ರ. ಚಿಣ್ಣಿ-ಕೋಲು, ಚೆಂಡು-ಬುಗರಿಯಿಂದ ಹಿಡಿದು 'ಕುಂಟೋಬಿಲ್ಲೆ'ಯ ತನಕ ಆಡಿ ಅಲೆದಾಡುವ ಸೌಲಭ್ಯವಿತ್ತು. ಬೆಳಗ್ಗೆ ಹೇಗೋ ದೊಡ್ಡವರ ಕಣ್ಣಿಂದ ತಪ್ಪಿಸಿಕೊಂಡು, ಊರಾಚೆಗೆ ನುಗ್ಗುತ್ತಿದ್ದೆವು. ನಮ್ಮಲ್ಲಿ ಎಲ್ಲರಿಗಿಂತ, ನಮ್ಮ ಪಾರ್ವತಿಗೆ ಧೈರ್ಯ ಹೆಚ್ಚು. ಮುಳ್ಳುಗಿಡಗಳ ಸಂದಿಗಳಲ್ಲಿ ನುಗ್ಗಿ ಹಣ್ಣು ಗಳನ್ನು ತೋರಿಸುತ್ತಿದ್ದಳು. ನೀಲಿಯ ಬಣ್ಣದ ಗೊಂಚಲಾಗಿ ಕಳಿತಿದ್ದ 'ರೋಜಾಗಿಡದ ಹಣ್ಣು'ಗಳನ್ನು ಎಲ್ಲರೂ ಮುಕ್ಕುತ್ತಿದ್ದೆವು. ವೀಳ್ಯದೆಲೆ ತೋಟದ ಬೇಲಿಗೆ ಮುತ್ತಿಗೆ ಹಾಕಿ, 'ಗಣಕೆಹಣ್ಣು'ಗಳ ಫಲಾಹಾರ ಮಾಡಿ, ದಾರಿಯಲ್ಲಿ ದೊರೆತ 'ಹತ್ತಿಹಣ್ಣು'ಗಳನ್ನು (ಬಹಳ ರಸವತ್ತಾಗಿರುತ್ತಿದ್ದವು) ಕೈಲಿ ಹಿಡಿದುಕೊಂಡೇ ಮನೆಯ ಕಡೆ ಹಿಂತಿರುಗುವಾಗ ದೂರದಲ್ಲಿ ಕೇಳಿಬಂದ ಬಸ್ಸಿನ ಹಾರ್ನ್ ನಮಗೆ ಆಟವಾಗಿ, ಬೇಕೆಂದೇ ರಸ್ತೆಯ ಆ ದಡದಿಂದ ಈ ದಡಕ್ಕೆ ಹಾರಾಡುವಾಗ, ಬಹಳ ಮೆಲ್ಲಗೆ ಗಾಡಿಯನ್ನು ತಂದು, ನಾವಿರುವಲ್ಲಿ ನಿಲ್ಲಿಸಿ, ಕಂಡಕ್ಟರು ಮತ್ತು ಡ್ರೈವರು ಬೆದರಿಸಿ, 'ಬಸ್ಸು ಹತ್ತಿರಕ್ಕೆ ಬಂದರೂ ರಸ್ತೆಯ ಮಧ್ಯಕ್ಕೆ ಓಡುತ್ತೀರಾ? ನಿಮ್ಮನ್ನೆಲ್ಲಾ ಇದರಲ್ಲಿ ತುಂಬಿಕೊಂಡು ಹೋಗುತ್ತೇವೆ ನೋಡಿ . . . !' ಎಂದಾಗ ಹಸ್ತಗಳಲ್ಲಡಗಿದ್ದ ಹಣ್ಣುಗಳನ್ನು ನಿಂತಲ್ಲಿಯೇ ಭೂಮಿಯ ಬಾಯಿಗೆ ಅರ್ಪಿಸಿ, 'ನಾ ಮುಂದು-ತಾ ಮುಂದು' ಎಂದು ಓಡುತ್ತಾ ನಡುವೆ ಸಿಕ್ಕಿದ 'ಅರಳಿ ಹಣ್ಣು'ಗಳನ್ನೇ ಜೇಬಿನಲ್ಲಿ ಹಾಕಿ ಕೊಂಡು ಬಂದು ಮನೆಯಲ್ಲಿ ಕಾದಿದ್ದ ಆಟದ ಬೊಂಬೆಗೆ ಬಡಿಸುತ್ತಿದ್ದೆವು. ಮನೆಯಲ್ಲಿ ಗಿಡದಿಂದ ಕೊಯ್ದು, ನನ್ನ ಪಾಲೆಂದು ಇಟ್ಟಿದ್ದ 'ಪರಂಗಿ ಹಣ್ಣು' ಒಬ್ಬಳೇ ತಿನ್ನುವಾಗ ಸಿಹಿ ಇರುತ್ತಿರಲಿಲ್ಲ.

ಮೇಲನಹಳ್ಳಿ ಗೋಪಾಲಕೃಷ್ಣ ದೇವರ ಗುಡಿಗೆ ಹೋಗುತ್ತಿದ್ದುದು

ಮುಕ್ಕಾಲು ಪಾಲು 'ಸೀಮೆ ಹುಣಿಸೆ ಹಣ್ಣಿ'ಗಾಗಿ. ಬಾಯಿಗೆ ಬಂದ ಪದ್ಯಗಳನ್ನು ಭಕ್ತಿಯಿಂದ ಹೇಳಿಕೊಂಡು ಹುಲ್ಲೆಮರಿಗಳಂತೆ ವಿಹರಿಸುತ್ತಿದ್ದೆವು. ಆದಿ ಹನುಮಂತರಾಯನ ಗುಡಿಯ ಎದುರುಗಡೆ ದೊಡ್ಡದೊಂದು ಆಲದ ಮರ. ಆ ಗುಡಿಗೆ ಕದವಿರಲಿಲ್ಲ. ಸ್ವತಂತ್ರವಾಗಿ ಮೂರ್ತಿಯ ಕಾಲುಗಳನ್ನು ಮುಟ್ಟಿ ಸಾಷ್ಟಾಂಗ ನಮಸ್ಕಾರ ಮಾಡಿ, ಮರದ ಬಿಳಲುಗಳಲ್ಲಿ ಪೈಪೋಟಿಯಾಗಿ ಉಯ್ಯಾಲೆ ಆಡಿ, ಕೈಗಳು ಉರಿಯುತ್ತಲೂ, ಅಲ್ಲೇ ತೋಪಿನಲ್ಲಿ ದೋರು ಹುಣಿಸೆಹಣ್ಣು, ಎಲಚಿಹಣ್ಣುಗಳನ್ನು ಎಲ್ಲರೂ ಕಿತ್ತು ತಿನ್ನುತ್ತಿದ್ದೆವು. ದಾರಿಯ ಇಕ್ಕಡೆಗಳಲ್ಲೂ ಇದ್ದ ಮರಗಳಿಂದ ಬಿದ್ದಿದ್ದ 'ಬಂದರಿಕೆ ಹಣ್ಣು'ಗಳನ್ನು, ಉಫ್ ಉಫ್ ಎಂದು ಮಣ್ಣನ್ನು ಊದಿ, ಚಪ್ಪರಿಸುತ್ತಾ ಮನೆಯ ಹಾದಿಯನ್ನು ಸವೆಸುತ್ತಿದ್ದೆವು.

ಗ್ರಾಮದ ದೇವತೆ 'ಬೇಲದ ಕೆರೆ ಅಮ್ಮ'ನಿಗೆ ಆರತಿ ಸೇವೆಗಾಗಿ ಮನೆಯ ಮಂದಿ ಹೊರಟರೆ, ನಾವುಗಳೆಲ್ಲಾ ಮುಖ್ಯವಾಗಿ ಹೋಗುತ್ತಿದ್ದುದು ಅಲ್ಲಿಯ ವನಮಧ್ಯದ ಲತಾವೃಕ್ಷಗಳ ಪರಿಶೋಧನೆಗಾಗಿ. ದೇವಸ್ಥಾನದ ಒಳಹೊಗುತ್ತಿದ್ದಂತೆಯೇ ಕಣ್ಣಿಗೆ ಬೀಳುತ್ತಿತ್ತು—ಬಲಗಡೆ ಮೂಲೆಯಲ್ಲಿ ಪರ್ವತಾಕಾರವಾಗಿ ಕುಳಿತಿದ್ದ ಕೋರೆಹಲ್ಲುಗಳ 'ಬೇತಾಳ ಮೂರ್ತಿ.' ಅದನ್ನು ಆದಷ್ಟೂ ಕಿರುಗಣ್ಣಿನಲ್ಲೇ ನೋಡುತ್ತಿದ್ದೆ! ಏಕೆಂದರೆ ಅದೂ ನನ್ನನ್ನೇ ನೋಡುತ್ತಾ ಇರುತ್ತಿತ್ತು! ಪುಣ್ಯಕ್ಕೆ ಪೂಜೆ ಮುಗಿಯುತ್ತಲೂ, ಅಲ್ಲಿಗೆ ಅರ್ಧ ಫರ್ಲಾಂಗಿನಲ್ಲಿ ತೆಂಗಿನ ತೋಟದ ನಡುವೆ ಇದ್ದ ಭಾರಿ ಪುರಾತನ 'ಮಲ್ಲೇಶ್ವರ' ದೇವಾಲಯದಲ್ಲಿ ಎಲ್ಲಾ ಮುತ್ತೈದೆಯರೂ ಸೇರಿ ಪ್ರಸಾದಗಳ ಸಂತರ್ಪಣೆ ನಡಸುವಾಗ, ನಮ್ಮ ಪಾಲಿಗೆ ಬರುವ ಬಾಳೇಹಣ್ಣು, ತೆಂಗಿನಕಾಯಿ ಚೂರುಗಳು ಕಡ್ಡಾಯವಾಗಿರುತ್ತಿದ್ದವಾದರೂ ಮನಸ್ಸೆಲ್ಲಾ ಸುತ್ತಲಿನ ತೋಟಗಳಲ್ಲೇ ನೆಟ್ಟಿರುತ್ತಿತ್ತು. ಮಹಿಳೆಯರು ಹಾಡುಗಾರಿಕೆ ನಡಸುವ ಮುಹೂರ್ತ ನೋಡಿಕೊಂಡು ಬಿಡುಗಡೆಯಾಗಿ ಸುರಹೊನ್ನೆವನದ ಸುರಭಿಯಲ್ಲಿ ತೂರಿಕೊಂಡು, ಗಿಣಿ, ಕೋತಿಗಳು ಅರ್ಧ ತಿಂದು ಉದುರಿಸಿದ ಮಾವಿನ ಹಣ್ಣುಗಳನ್ನು ಮಣ್ಣು ಮಿಶ್ರವಾಗಿಯೇ ತಿನ್ನುತ್ತಿದ್ದುದರ ಸವಿ ಇನ್ನೆಲ್ಲುಂಟು? ಹಾಗೆಯೇ ಅಡ್ಡಾಡುತ್ತಾ, ಬದುಗಳಲ್ಲಿಯೇ ನಗುತ್ತಾ ದುಂಡು ದುಂಡು ಹಣ್ಣುಗಳನ್ನು ದಂಡಿಯಾಗಿ ಹೊತ್ತಿದ್ದ 'ಸೊಳ್ಳೆ ಹಣ್ಣು'ಗಳನ್ನು

ಒಬ್ಬರ ಭುಜದ ಮೇಲೆ ಮತ್ತೊಬ್ಬರು ಏರಿ, ಮೈಮೇಲೆಲ್ಲಾ ಜಾಲಿಯ ಮುಳ್ಳು ಗಳು ಸರಸವಾಡಿದರೂ ಲೆಕ್ಕಿಸದೆ ಕಿತ್ತು, ಕೈ ಬಾಯಿ ಗೋಂದು ಮಿಶ್ರ ರಾಯಪುಡಿ ಸಕ್ಕರೆಯಂತಾಗಲು ಲಲ್ಲೆ ಹೊಡೆಯುತ್ತಾ ನಡೆಯುತ್ತಿದ್ದುದು ಈಗ ಕನಸಾಗಿದೆ.

ಭಾನುವಾರಗಳಲ್ಲಿ ನಮ್ಮಣ್ಣ ಉಪಾಯ ಮಾಡಿ ತಪ್ಪಿಸಿಕೊಂಡು ಹೋದರೂ ನಾನೂ ಬೆನ್ನ ಹಿಂದೆಯೇ ಆಲದ ಕಟ್ಟೆಯ ಹೊಲ ತೋಟಗಳಿಗೆ ಹಿಂಬಾಲಿಸುತ್ತಿದ್ದೆ. ಹೊಲದಲ್ಲಿ ಅಮೃತಧಾರೆಯಂತೆ ಸೂರ್ಯನ ಬೆಳಕನ್ನು ಮರುಕೊಳಿಸಿಕೊಂಡು ತಂಪಾಗಿ ಇಳಿಯುತ್ತಿದ್ದ ಝರಿಗಳ ನೀರಿನಲ್ಲಿ ಆಟ ವಾಡುತ್ತಾ, ಮರೆಯಲ್ಲಿ ಹಾಯ್ದು ಹಳ್ಳದಲ್ಲಿ ಕರೆಯುತ್ತಿದ್ದ 'ಈಚಲು ಹಣ್ಣು' ಗಳನ್ನು ಕದ್ದು ಹಾರಿಸಿಕೊಂಡು (ಈಚಲು ಹಣ್ಣುಗಳನ್ನು ತಿನ್ನಬಾರದೆಂದು ದೊಡ್ಡವರು ಹೇಳಿದ್ದರಿಂದ) ತಿಂದುದು ಅರ್ಧ ಸಿಹಿ-ಅರ್ಧ ಕಹಿ! 'ಮರಳು ಪಟ್ಟಿ'ಯಲ್ಲಿ ಉರುಳಾಡುವ 'ಗುಪ್ಪಟ್ಟೆ ಹಣ್ಣು'ಗಳು, 'ಅಮಟೆ ಕಾಯಿ,' ಮತ್ತು 'ಕಲ್ಲಂಗಡಿ, ಕೆಕ್ಕರಕೆ' ಹಣ್ಣುಗಳನ್ನು ಸುಗ್ಗಿಯಾಗಿ ಮುಕ್ಕುತ್ತಿದ್ದೆ. ಮರಳನ್ನು ಬೆರಳುಗಳಿಂದ ಬಗೆದು ಅರ್ಧ ಬಲಿತ 'ನೆಲಗಡಲೆಕಾಯ'ನ್ನು ಅಗಿ ಯುತ್ತಿದ್ದೆ. ಹಳ್ಳದ ದಡದಲ್ಲಿ ಕಿಲಕಿಲವೆನ್ನುತ್ತಿದ್ದ ಕಳಿತ 'ಕಾರೆಯ ಹಣ್ಣು' ಗಳ ಮೇಲೆ ಕೂತಿರುತ್ತಿದ್ದ ಕೆಮ್ಮಣ್ಣು ಜೀರುಂಡೆಯನ್ನು ಓಡಿಸಿ ಚಪ್ಪರಿಸು ತ್ತಿದ್ದೆ. ಸ್ವಚ್ಛವಾಗಿ ತೊಳೆದ ಮುತ್ತಿನಂತೆ ಸಣ್ಣ ರೆಂಬೆಗಳಲ್ಲಿ ಥಳಥಳಿಸುತ್ತಿದ್ದ 'ಉಪ್ಪೆಹಣ್ಣು'ಗಳು, ಮತ್ತು ನೀಲಿಯ ಆಕಾಶದ ಕಡೆ ನಗುತ್ತಿದ್ದ 'ಹುಲಿಹಣ್ಣು' ಗಳ ಸಂಗಡ ಸ್ನೇಹ ಬೆಳೆಸಿಕೊಂಡು ತೋಟದತ್ತಕಡೆ ಪಶ್ಚಿಮದಿಂದ ಪೂರ್ವಕ್ಕೆ ಹೊಯ್ದಾಡುವ ತೆನೆಗಳನ್ನು ಹೊತ್ತು ಭೂಭಾರವನ್ನು ಇಳಿಸುವ ರಾಗಿ, ಜೋಳ ಇತ್ಯಾದಿ ಹೊಲಗಳಲ್ಲಿ ಮಾತಾಡಿಕೊಂಡು ಅಣ್ಣನ ಹಿಂದೆ, ಮುಂದೆ, ಅಡ್ಡ ವಾಗಿಯೂ ನುಗ್ಗುತ್ತಿದ್ದೆ. ತೋಟದ ಕಡೆ ತಿರುಗುವ ಓಣಿಯಲ್ಲಿ 'ಗೋಣಿಯ ಹಣ್ಣು'ಗಳು ಪಕ್ಷಿಮಂಡಲ ತಿಂದು ತೇಗಿ ಉದುರಿಸಲ್ಪಟ್ಟು, ದಾರಿಯಲ್ಲಿ ದಟ್ಟ ವಾಗಿರುವಾಗ, ಅವುಗಳ ಬಣ್ಣಕ್ಕೆ ಮನಸೋತು ಅರ್ಧ ಕಚ್ಚಿಯಾದರೂ ಬಿಸಾಡು ತ್ತಿದ್ದೆ. ತೋಟಕ್ಕೆ ಕಾಲಿಡುವ ಎಲ್ಲರನ್ನೂ ಅಕ್ಕರೆಯಿಂದ ಆಮಂತ್ರಿಸುತ್ತಿದ್ದ 'ಬಿಳಿಯ ಬೇಲ ಮತ್ತು ಕರಿಯ ಬೇಲ'ದ ಹಣ್ಣುಗಳನ್ನು ಹೊತ್ತುಕೊಂಡು ಹೋಗಿ, ಬಂಡೆಗೆ ಹೊಡೆದು ತಿಂದದ್ದು ಜೇನಿಗಿಂತ ಮಧುರವಾಗಿತ್ತು.

ಪುಟ್ಟ ಹುಡುಗಿ ನಾನೆಂದು ಹೆದರಿಸುವಾಗ ದೊಡ್ಡ ಬಾವಿಯ ದಡದಲ್ಲೇ ಬಾಗಿ ನಿಂತಿದ್ದ ಮರದಿಂದ 'ನಾಯಿ ನೇರಿಳೆ' ಹಣ್ಣುಗಳು ನನ್ನ ತಲೆಯನ್ನು "ಟಪ್" ಎಂದು ನೇವರಿಸಿ, ಬಾಯಲ್ಲಿ ಪಾನಕ ಮಾಡುತ್ತಿದ್ದವು. ಕೊಂಚ ದೂರದಲ್ಲಿ ಪುಟ ಪುಟ ಕುಣಿಯುತ್ತಾ ಕೈಗೇ ಎಟಕುತ್ತಿದ್ದ 'ಸೀಬೆಯ ಹಣ್ಣು'ಗಳನ್ನು ಅರ್ಧ ತಿಂದು ಬಿಸಾಡುತ್ತಿದ್ದೆ. ನನ್ನ ಬಟ್ಟೆಗಳನ್ನೇ ಹಿಡಿದು ನಿಲ್ಲಿಸುವ ಕಿತ್ತಿಲೆಯ ಮುಳ್ಳುಗಳನ್ನು ನೋಡದೆ ಮರವನ್ನು ಹತ್ತಿ 'ಕಿತ್ತಿಲೆ ಹಣ್ಣು'ಗಳನ್ನು ತಿನ್ನುವ ಭಾಗ್ಯವೇ ಭಾಗ್ಯ. "ಏನೋ ಮಗು ಬಂದಿದೆ" ಎಂದು ತೋಟ ಕಾಯುವ ಸಿದ್ದನು ಆ ಅಗ್ರಹಾರಕ್ಕೇ ವಾಸನೆ ಬೀರುವ, ಹತ್ತಿರ ವಾಸಿಸುವ ಕರಡಿಗಳ ಮೂಗನ್ನೇ ಬಡಿಯುತ್ತಿದ್ದ 'ಹಲಸಿನಹಣ್ಣು' ಗಳನ್ನು ಕೊಯ್ದು ಬಾಳೆಯ ಎಲೆಯ ಮೇಲೆ ತೊಳೆಗಳನ್ನು ತಿನ್ನ ಬಡಿಸು ವಾಗ ತೊಟ್ಟಿಕ್ಕುವ ರಸವನ್ನು ಹೀರುತ್ತಾ, ನಾನು ತೊಳೆಯ ಹೊಕ್ಕಳನ್ನೂ ಬಿಡದೆ ತಿನ್ನುತ್ತಿದ್ದೆ.

ಕಾರ್ತಿಕಮಾಸಕ್ಕಾಗಿ ಕಾದಿರುತ್ತಿದ್ದೆವು ನಾವು—ಹುಡುಗಿಯರೂ ಹುಡುಗರೂ. ಕಾರಣವಿಷ್ಟೆ: ಕೊಲ್ಲಾಪುರದಲ್ಲಿ ಗಂಗಾಪೂಜೆಗಾಗಿ ಮೂವತ್ತು ನಾಲ್ವತ್ತು ಜನ ಹೊರಡುತ್ತಿದ್ದರು. 'ಕೊಲ್ಲಾಪುರ' ಎಂದರೆ ಊರಲ್ಲ— ಕೇರಿಯಲ್ಲ. ಕೇವಲ ಅರಣ್ಯದ ಅಂಚು ಮಾತ್ರ. ಅಲ್ಲಿಯ ಐದಾರು ಮೈಲಿ ಗಳನ್ನು ಹಾಯುವುದೆಂದರೆ ನಮಗೆಲ್ಲಾ ಸಂಭ್ರಮದ ಹಬ್ಬ. ಅದರ ಹೆಸರು ಕಿವಿಗೆ ಬೀಳುತ್ತಲೇ ನಿಂತಲ್ಲೇ ಕಾಲೆಳೆಯುತ್ತಿದ್ದೆವು. ದೊಡ್ಡವರೆಲ್ಲಾ ಬೆಳಗ್ಗೆ ಆರು ಘಂಟೆಗೇ ಗುಂಪುಗುಂಪಾಗಿ (ತಮ್ಮ ತಮ್ಮ ನಡಗೆಯ ಯೋಗ್ಯತಾನು ಸಾರ) ಮುಂಬರಿಯುವಾಗ (ಎತ್ತಿನ ಬಂಡಿಯಾಗಲಿ, ಮೋಟಾರು ಕಾರುಗಳಾ ಗಲಿ ಆ ಅಡವಿಯ ಬಂಡೆರಸ್ತೆಯಲ್ಲಿ ಹೋಗುವುದು ದುಸ್ತರ) ತಂಡ ತಂಡ ವಾಗಿ ನಾವು ಚಂಗನೆ ಚಿಮ್ಮಿಕೊಂಡು ಕಲ್ಲು ಬಂಡೆಗಳ ಮೇಲೆ ಜಿಗಿದು ಧ್ಯಾರಿ ಪೊದೆಗಳಲ್ಲಿ ಹಾಯುತ್ತಿದ್ದೆವು. ಜಾಲಾರಿ ಹೂಗಳ ವಾಸನೆಯಲ್ಲಿ ಮಿಂದು ಪುಟ್ಟ ಮಕ್ಕಳ 'ಚೀರ್' ಶಬ್ದ ಕಾಡಿನಲ್ಲಿ ಪ್ರತಿಧ್ವನಿಕೊಡುವಾಗ, ಹೆಂಗಸರ 'ಗಿಜ ಗಿಜ' ಮಾತು (ನಮ್ಮನ್ನು ನರಿಗಳ ಹೆದರಿಕೆಗಾಗಿ ಭಯಹುಟ್ಟುವಂತೆ ಮಾಡುತ್ತಿದ್ದರು) ನಮ್ಮ ಕರ್ಣೇಂದ್ರಿಯಗಳನ್ನು ಬಂದು ತಾಗುವಷ್ಟರಲ್ಲಿ, ನಾವು ಹನುಮದೇವರ ಅವತಾರಕ್ಕೆ ಶರಣಾಗುತ್ತಿದ್ದೆವು. ರಕ್ತವರ್ಣದ 'ದೇವ

ದಾರಿಯ ಹಣ್ಣು'ಗಳನ್ನು ಜಗ್ಗಿಸಿ ಮೇಯುತ್ತ, ಬಿರಿದ ಕಲ್ಲುಸಕ್ಕರೆಯಂತಹ 'ಬಿಕ್ಕೆಹಣ್ಣು'ಗಳನ್ನು ಹೊಟ್ಟು ಸಮೇತ ಗಬಗಬನೆ ನುಂಗುವುದರ ಜೊತೆಗೆ "ಗೇರು ಹಣ್ಣು"ಗಳನ್ನು ತಿಂದು, ಕೈ ಬಾಯಿ ಮೈ ಹುಣ್ಣಾಗಿಸಿಕೊಳ್ಳುವುದು —ಇಲ್ಲಿ ಬೆಂಗಳೂರಿನ ಕೃತಕ ತೋಟಗಳಲ್ಲಿ ಸಾಧ್ಯವೆ? ಸ್ವೇಚ್ಛೆಯಾಗಿ ವನ ಮಧ್ಯದಲ್ಲಿ ಕೇಕೆಹಾಕುವ ನವಿಲುಗಳ ಗುಂಪು ನಮ್ಮ ಅಣಕದ ಕೇಕೆಗೆ ಬೆದರಿ ಓಡುವ ಅವುಗಳ ಸೊಬಗು ಕಥೆಯನ್ನು ಓದಿ ಕೇಳಿದರೆ ಕಾಣುವುದಿಲ್ಲ. ಅವುಗಳನ್ನು ನೋಡುವುದೂ ಒಂದು ಸುಕೃತ ವಿಶೇಷದ ಫಲವೇ ಸರಿ. ಬರುವಾಗ ದಾರಿಯಲ್ಲಿ "ಬೇಲದ ಕೆರೆ" ತೋಟವನ್ನು ತುಳಿಯದೆ ಇರುತ್ತಿರಲಿಲ್ಲ. ಆ ಕೆಂಪು ಮಣ್ಣಿನ ನೆಲದ ಕೆಂಪು ಹೊಂಬಾಳೆಯ ಸೊಂಪಿನಲ್ಲಿ ಗಗನ ಚುಂಬಿಯಾದ ತೆಂಗಿನ ಮರಗಳಿಂದ ಎಳನೀರನ್ನು ಇಳಿಸಿಕೊಂಡು, ಹುಲ್ಲಿನ ಮೇಲೆ ಕೂತು ಎರಡು ಕೈಗಳಿಂದಲೂ ಹದವಾದ ತಿರುಳನ್ನು ಗೋರಿಕೊಂಡು ತಿಂದು ತೃಪ್ತಿಯಾಗಿ ಸಂಜೆಗೆ ಮನೆಯ ದೀಪಗಳನ್ನು ನೋಡುತ್ತಿದ್ದೆವು.

"ಆಶ್ರಮ"ದಲ್ಲಿ ಬೇವಿನಿಂದ ಹಿಡಿದು, ಸೇಬಿನ ತನಕ ಮರ ಗಿಡಗಳಿದ್ದುವು. ಮಂಟಪದ ಹಿಂದೆ ತಾವೇ ಬೆಳೆದಿದ್ದ 'ಚಪ್ಪರಬದನೆ ಹಣ್ಣು'ಗಳೆಂದರೆ ಅಷ್ಟಕ್ಕಷ್ಟೆ. ಆದರೆ ನಾನು ಬಹಳ ಬಯಸುತ್ತಿದ್ದುದು, ಅಕ್ಕರೆಯ 'ಅಂಜೂರದ ಹಣ್ಣು'ಗಳನ್ನು. ಎಲ್ಲರ ಕಣ್ಣೂ ಅವುಗಳ ಮೇಲೆಯೇ ಇರುತ್ತಿದ್ದಿತಾದರೂ, ಒಂದೊಂದು ಸಾರಿ, ನನ್ನ ಪಾಲಿಗೂ ಗುರಿಯಾಗುತ್ತಿದ್ದವು. ಬೇಲಿಯ ಮೇಲೆ ಬಳಸಿದ ಬಳ್ಳಿಯ ಎಲೆಗಳ ಮರೆಯಲ್ಲಿ ಇಣಿಕಿ ನೋಡುತ್ತಿದ್ದ 'ತೊಂಡೆ ಹಣ್ಣು'ಗಳು ಸದಾ ಸಿಕ್ಕುತ್ತಿದ್ದುವು. ಕಡೆಗೆ ಏನೂ ಹಣ್ಣು ಸಿಕ್ಕದಿದ್ದರೆ, 'ಹೇರಿಳೆಕಾಯಿ' ಇಲ್ಲವೆ 'ನಿಂಬೆಹಣ್ಣು'ಗಳನ್ನು ಕಿತ್ತುಕೊಂಡು, ಹಿಂಡಿ, ರಸಕ್ಕೆ ಸಕ್ಕರೆಯನ್ನು ಬೆರೆಸಿ ಚಪ್ಪರಿಸುತ್ತಾ ಮನೆಯಲ್ಲಿ ಬೇಕೆಂದವರಿಗೆ ಕೊಡುತ್ತಿದ್ದೆ.

ಸೋಮವಾರ ಸಂತೆಗಾಗಿ ದೂರದ ಕಾಡುಹಳ್ಳಿಗಳಿಂದ ಲಂಬಾಣಿ ಸ್ತ್ರೀಯರು ವಿಚಿತ್ರವಾದ ಅಸಂಖ್ಯ ಜಡೆಗಳಿಂದ ಅಲಂಕೃತರಾಗಿ ಹಣ್ಣುಗಳ ಮಕ್ಕರಿಗಳನ್ನು ತಲೆಯಮೇಲಿಟ್ಟುಕೊಂಡು ತಮ್ಮ ಕೋಕಿಲ ಕಂಠದ ಮಾತಿನಲ್ಲಿ ಕೂಗಿಕೊಂಡು ಬಂದ ಕೂಡಲೆ ಒಳಗಿದ್ದ ಹೆಂಗಸರು ಮಕ್ಕಳಾದಿಯಾಗಿ ಹೊರಗಡೆ ಕಲೆಯುತ್ತಿದ್ದರು. ದುಡ್ಡಿಗೆ ಬದಲಾಗಿ ರೇಷ್ಮೆಯ, ಇಲ್ಲವೆ ನೂಲಿನ

'ತುಕ್ಕು'ಗಳನ್ನು (ಲಂಬಾಣಿ ಸ್ತ್ರೀಯರು 'ಗೊಂಡೆ'ಪ್ರಿಯರು; ತುಕ್ಕಿನಿಂದ ಸಣ್ಣ ಸಣ್ಣ ಕುಚ್ಚುಮಾಡಿಕೊಂಡು ತಮ್ಮ ಉಡುಪನ್ನು ಅಲಂಕರಿಸಿಕೊಳ್ಳುವುದೇ ಅವರ ಹೆಮ್ಮೆ) ತೆಗೆದುಕೊಂಡು ಅಗ್ಗ ದುಗ್ಗಾಣಿಯಾಗಿ 'ತುಗ್ಗಲಿ ಹಣ್ಣು'ಗಳು 'ಸೀತಾಫಲ, ರಾಮಫಲ'ದ ಹಣ್ಣುಗಳನ್ನು ಕೊಡುತ್ತಿದ್ದರು.

ಅಂದು ಹೈಸ್ಕೂಲಿನ ಮೊದಲ ಮೆಟ್ಟಲನ್ನು ಕಂಡೆ. ಶಾಲೆಗೆಲ್ಲಾ ನವೀನ ಕಳೆ ಬಂದಿತ್ತು. ಕೀರ್ತಿಶೇಷರಾದ ಪೂಜ್ಯ ಬಿ. ಎಮ್. ಶ್ರೀ. ಅವರನ್ನು ಆ ವರ್ಷ ತಾನೆ ಆರಂಭವಾದ 'ಕರ್ಣಾಟಕ ಸಂಘ'ಕ್ಕೆ ಜೀವಕಳೆ ತುಂಬಲು ಬರ ಮಾಡಿಕೊಂಡಿದ್ದೆವು. ಆ ಇಡೀ ದಿನ ನಮಗೆಲ್ಲಾ ಹೊಸ ಉಗಾದಿಯಂತಿತ್ತು. ಸಂಘಕ್ಕೆ ನನ್ನನ್ನು ಕಾರ್ಯದರ್ಶಿನಿಯಾಗಿ ಚುನಾಯಿಸಿದ್ದರು. ಆಗಿನ ನಮ್ಮ ಪ್ರೇಮದ "ಕನ್ನಡ ಪಂಡಿತೆ" ನನ್ನನ್ನೂ ಜೊತೆಯಲ್ಲಿ ಕರೆದುಕೊಂಡು, ಹಾರ ತುರಾಯಿಗಳನ್ನು ಕೊಳ್ಳಲು ಬೆಂಗಳೂರು ಸಿಟಿ ಮಾರ್ಕೆಟ್ಟಿಗೆ ಬಂದರು. ಆ ದಿನವೇ ನಾನು ಆ ಹಣ್ಣಿನ ಸಂತೆಯನ್ನು ಮೊದಲ ಸಲ ಕಂಡದ್ದು. ದಕ್ಷಿಣ ದಿಂದ ಹೊಕ್ಕು, ಕೊಳೆಯುತ್ತ ನಗುವ ಹೂವಿನ ಘಮ ಘಮ ಅಂಗಡಿಗಳನ್ನು ದಾಟಿ, ಅತ್ತ ಇತ್ತ ತಿರುಗಿದ ಕೂಡಲೆ ತೇರಿನಂತೆ ಪೇರಿಸಿಟ್ಟ ಬಣ್ಣ ಬಣ್ಣದ ಬೋಳು ಬೋಳು ಹಣ್ಣುಗಳ ಸಾಲು ಕಣ್ಣಿಗೆ ಬಿತ್ತು. ದೇಶ ವಿದೇಶದ— ಚಪ್ಪರದ ದ್ರಾಕ್ಷಿ, ಒಣಗಿದ ದ್ರಾಕ್ಷಿ, ಕಿತ್ತಿಲೆ, ಚಕ್ಕೋತ, ಸೀಬೆ, ಅಂಜೂರ, ಸೇಬು, ಮರಸೇಬು, ಕಿತ್ತಿಲೆ, ಬಾಳೆ, ಸಪ್ಪೋಟ, ದಾಳಿಂಬೆ, ಮೂಸಂಬಿ, ಕೆಕ್ಕರಕೆ, ಅನಾನಸ್, ಬೇಲ, ಎಲಚಿ, ಹಲಸು, ಕಲ್ಲಂಗಡಿ, ಸಿದ್ದೋಟಿ, ಖರಬೂಜ, ಮಾವು, ಖರ್ಜೂರ, ಗೇರುಹಣ್ಣು, ಸೀತಾಫಲ, ರಾಮಫಲ, ಕರೀ ಬೇವಿನ ಹಣ್ಣು, ಬೆಟ್ಟದ ನೆಲ್ಲಿ, ಕಿರುನೆಲ್ಲಿ, ಕೊಮರಿಕಾಯಿ, ಪರಂಗಿಹಣ್ಣು, ನಿಂಬೆಹಣ್ಣು . . . ಇತಿ ಆದಿಯಾಗಿ ಕಣ್ಣನ್ನೇ ಕೋರೈಸುತ್ತಿದ್ದವು. ಕಳಿತವೇ ಒಂದು ಸಾಲು, ಕೊಳೆತವೇ ಇನ್ನೊಂದು ಸಾಲು. ಅವುಗಳ ಮೇಲೆ ಚರಂಡಿಯ ಸೊಳ್ಳೆ, ನೊಣಗಳ ಪರದಾಟ. ಅಂಗಡಿಯವ, ಬಂದ ಗಿರಾಕಿಗಳಿಗೆಲ್ಲಾ "ಚಲೋ ಮಾಲು, ಹಸನು. ತೊಗೊಳ್ಳಿ ಸ್ವಾಮಿ, ತೊಗೊಳ್ಳಿ ತಾಯಿ, ಎಲ್ಲೂ ಸಿಕೊಲ್ಲ." ಎಂದು ಒಂದು ಹೋಳನ್ನು ಕೊಡುತ್ತಾ ನಮ್ಮ ಕಡೆ ತಿರುಗಿದನು. ಆ ನೂಕುನುಗ್ಗಾಟದಲ್ಲಿ ನಿಂತು, ಆತುರದಲ್ಲಿ ಆರಿಸಿಕೊಳ್ಳುವಾಗ, ನಾವು ಬೇಡವೆಂದು ತೆಗೆದುಹಾಕಿದ ಹಣ್ಣನ್ನೇ 'ತೊಗೊಳ್ಳಿ ತಾಯಿ, ರಾಜಾ ಮಾಲು!'

ಅನ್ನುತ್ತಲೂ ತೆಗೆದುಕೊಂಡು ಬಂದು, ಮನೆಯಲ್ಲಿ ಮೋಸವನ್ನು ಪತ್ತೆ ಹಚ್ಚಿದೆವು. ಅಂತೂ ಹಣ್ಣುಗಳ ಪ್ರದರ್ಶನ ಇಲ್ಲಿ ಗಡಿಬಿಡಿ ಕೆಲಸ.

೧೯೫೦ ನೆಯ ಇಸವಿಯಲ್ಲಿ ಮೈಸೂರಿಗೆ ಹೋಗಿದ್ದೆ. ಒಂದು ಮಧ್ಯಾಹ್ನ ಬಹಳ ಬೇಸರವಾಗಿತ್ತು. ಆಪ್ತ ಗೆಳತಿಯೊಬ್ಬಳ ಸಂಗಡ, ಸೊಪ್ಪಿನ ಕೊಳದ ರಸ್ತೆಯನ್ನು ಬಿಟ್ಟು, ಆನೆಕರುಹಟ್ಟಿಯನ್ನು ದಾಟಿ, ಚಾಮುಂಡಿ ಬೆಟ್ಟದ ರಸ್ತೆಗೆ ಕಾಲಿಟ್ಟೆವು. ಸುತ್ತಣ ಮರಗಳಿಂದ ತಂಪಾದ ಮಂದಮಾರುತ ಸುಯ್ಯುತ್ತಿತ್ತು. ಎಲ್ಲಿಗೆಂಬ ಎಲ್ಲೆಯಿಲ್ಲದೆ ಕಾಲು ಹಾಕುತ್ತಿದ್ದೆವು. ಇದಕ್ಕಿದ್ದಂತೆ, ಬಲಗಡೆಯಲ್ಲಿ "ಮಧುವನ" ಎಂಬ ಅಕ್ಷರ ಕಣ್ಣಿಗೆ ಬಿತ್ತು. ದೊಡ್ಡ ಬಾಗಿಲು ತೆರೆದಿತ್ತು. ನೀನೇ ಎನ್ನುವರಾರೂ ಇರಲಿಲ್ಲ. ಒಳಗಡೆ ಸಾಲಾಗಿ ಬೆಳೆದಿದ್ದ ಕೆಂಡಸಂಪಿಗೆಯ ಮರಗಳನ್ನು ಕಂಡು, ಹೂವಿಗಾಗಿ ಒಳಹೊಕ್ಕೆವು. ಹೂ ಕಿತ್ತು ತಲೆಗೆ ಸಿಕ್ಕಿಸಿಕೊಂಡು ಸುತ್ತಲೂ ನಮ್ಮ ದೃಷ್ಟಿಯನ್ನು ಪಸರಿಸಿದರೆ! 'ಸಪೋಟಾ', 'ಕೊಮರಿ' ಹಣ್ಣುಗಳು ತೂಗಾಡುತ್ತ ಇದ್ದ ತೋಪು ಕಣ್ಣಿಗೆ ಬಿತ್ತು. ಕೊಂಚ ಧೈರ್ಯವಾಗಿ ಅತ್ತ ಸಾಗಿ, ನಮ್ಮ ತಾತನ ತೋಟವೋ ಅನ್ನುವಂತೆ ಓಡಾಡಿ, ತೋಟವೆಲ್ಲಾ ಕೇಳುವಂತೆ ನಗುತ್ತಾ, ಹಣ್ಣುಗಳನ್ನು ಕಿತ್ತು, ಒಬ್ಬರ ಮುಖವನ್ನೊಬ್ಬರು ನೋಡುತ್ತಾ ಇರುವಲ್ಲಿ—ಮಹಿಷಾಸುರ ಪುತ್ರನಂತೆ ಗರ್ಜಿಸಿ, ನೆಲವನ್ನು ಬಡಿಯುತ್ತಾ ನಮಗೆ ನಾಲ್ಕಾರು ಗಜದ ಅಂತರದಲ್ಲಿ ಮನುಷ್ಯಾಕೃತಿಯೊಂದು ಪ್ರತ್ಯಕ್ಷವಾಯಿತು. ಕೈಲಿದ್ದ ಹಣ್ಣುಗಳು ಜಾರಿದವು! "ಓಹೋ! ಓದೋ ಮಕ್ಕಳಂಗೆ ಕಾಣ್ತೀರ. ಇನ್ನೊಂದು ಸಾರ್ತಿ ಇಲ್ಲಿಗೆ ಬರಬೇಡ್ರಿ. ದುಡ್ಡಿದ್ದರೆ ಕೊಡಿ." ಎಂದು ಆತ ಕೇಳಿದ. ಕೂಡಲೆ ಕರವಸ್ತ್ರದ ಕೊನೆಯಲ್ಲಿ ಎಂಟಾಣೆ ಕುಳಿತಿದ್ದುದು ಅವನ ಕೈಗೆ ನೆಗೆಯಿತು. ಅವನು ಎಣಿಸಿ ಕೊಟ್ಟ ಹಣ್ಣುಗಳನ್ನು ಹಿಡಿದುಕೊಂಡು, ಹತ್ತಿರ ಇನ್ನೊಂದು ದಾರಿಯಲ್ಲಿ ಹಿಂತಿರುಗುತ್ತಾ, ನಮಗೆ ಅಂದು ಜೀವದಾನ ಮಾಡಿ, ಮಾರ್ಗ ತೋರಿಸಿದ, "ಬೆಟ್ಟದ ಚಾಮುಂಡೇಶ್ವರಿ" ತಾಯನ್ನು ಮನಸ್ಸಿನಲ್ಲಿ ಸ್ಮರಿಸಿಕೊಂಡು ಮಿತ್ರಳೊಂದಿಗೆ ಮನೆಯನ್ನು ಸೇರಿದೆ.

ಒಂದು ಸಾರಿ ಬೇಸಗೆಯಲ್ಲಿ ಸಾಗರಕ್ಕೆ ಹೋಗಿದ್ದಾಗ, ಇಕ್ಕೇರಿಯ ಶಿವಪ್ಪನಾಯಕನ ಹಳೆಯ ದೇವಾಲಯ ನೋಡಲು ಕಾಲುನಡೆಯಲ್ಲಿ ಮನೆಯಿಂದ ಹೊರಟೆವು. ಮನಸ್ಸೆಲ್ಲಾ ಭಕ್ತಿಯಿಂದ ಭೂಮಿಯನ್ನು ಆರಾಧಿಸು

ತ್ತಿದ್ದ ಅಚ್ಚ ಹಸುರಾದ ಪ್ರಕೃತಿಯ ಚೆಲುವಿನ ಕಡೆ ಸುಳಿಯಿತು. ಸುತ್ತ ನೋಡುತ್ತಾ ಅಲ್ಪ ಮಾನವರು ನಾವು ನಡೆಯುವಾಗ, ಇದ್ದಕ್ಕಿದಂತೆ 'ಜಮ್ಮು ನೇರಲೆ' ಮರಗಳ ಸಾಲು ಸಿಕ್ಕಿತು. ಕಿರಿಯರು ಹಿರಿಯರೆನ್ನದೆ ಓಡಿ, ನೆಗೆದು ರೆಂಬೆಗಳನ್ನು ಹಿಡಿದು ಜಗ್ಗಿಸಿ, ಹಣ್ಣುಗಳನ್ನು ಎಲ್ಲರೊಂದಿಗೆ ಸೂರೆ ಯಾಗಿ ತಿಂದು ಮುಂದೆ ನೋಡಿದರೆ—ಭಾರತದ ಹಿರಿಯ ಗುಣವಾದ ಅತಿಥಿ ಸತ್ಕಾರವನ್ನು ನಟ್ಟಡವಿಯಲ್ಲೂ ನಿಲ್ಲದೆ ಜರುಗಿಸುತ್ತಿರುವ ದೊಡ್ಡ ತಿಳಿನೀರಿನ ಸರೋವರದಲ್ಲಿ ಮುಗುಳುನಗುತ್ತಾ ನರ್ತಿಸುತ್ತಿದ್ದ ತಾವರೆ ಹೂಗಳು, ಮೆಲು ಗಾಳಿಗೆ ಮೈಯೊಡ್ಡಿ, ನಮ್ಮ ಸಂಗಡ ಬರಲು ಒಪ್ಪಿಗೆ ಸೂಚಿಸುತ್ತಿದ್ದವು.

ಹೀಗೆ ಸುತ್ತಲೂ ಇತ್ತ ಪುಷ್ಪ, ಅತ್ತ ಫಲ, ಪ್ರಕೃತಿಯ ಪವಿತ್ರ ಮಡಲಿ ನಲ್ಲಿ ಸ್ವೇಚ್ಛೆಯಾದ ಸ್ವಚ್ಛತ್ಯಾಗದಿಂದ ಮಾನವಕೋಟಿಯ ಅಂಧತೆಯನ್ನು ಒದೆದಟ್ಟಿ, ಅವನ ಕಣ್ಣುತೆರೆಯಲು ಧಾವಿಸಿ ನೀಡುವ ನಾ ಕಂಡ ಆ ಮಧುರ ಫಲಗಳೆಲ್ಲಿ? ಪಟ್ಟಣದ ತಕ್ಕಡಿಯ ಮೇಲೆ ತೂಗಿಕೊಂಡು ಪೊಟ್ಟಣಗಳಲ್ಲಿ ಸಂಕೋಚವಾಗಿ ನಿದ್ರಿಸುವ ಈ ಹಣ್ಣುಗಳೆಲ್ಲಿ?

**ಚಿ. ನಂ. ಗಂಗಾದೇವಿ**

## ತ್ಯಾಗ

ಇಚ್ಛೆಯನು ಅರಿದಿತ್ತ ನುಚ್ಚೊಂದು ಮಾಣಿಕವು;
ಇಚ್ಛೆಯು ತೀರ್ದ ಬಳಿಕಿತ್ತ ಮಾಣಿಕವು
ನುಚ್ಚಿನಿಂದತ್ತ ಸರ್ವಜ್ಞ.

ಆಗ ಬಾ ಈಗ ಬಾ ಹೋಗಿ ಬಾ ಎನ್ನದೇ
ಆಗಲೇ ಕರೆದು ಕೊಡುವನ ಧರ್ಮ ಹೊ–
ನ್ನಾಗದೇ ಬಿಡದು ಸರ್ವಜ್ಞ.

ಆಡದೇ ಕೊಡುವವನು ರೂಢಿಯೊಳಗುತ್ತಮನು
ಆಡಿ ಕೊಡುವವನು ಮಧ್ಯಮನಧಮ ತಾ–
ನಾಡಿ ಕೊಡದವನು ಸರ್ವಜ್ಞ.

# ನಾನು ಕಂಡಿರುವ ಕಣ್ಣುಗಳು

ಕಣ್ಣುಗಳು! ಯಾರ? ಮಾನವರದೋ? ಬಾನವರದೋ? ಪ್ರಾಣಿಗಳದೋ? ಚಿತ್ರಗಳದೋ? ಅಥವಾ ಕವಿಗಳ ಭಾಷೆಯಲ್ಲಿ ಹೇಳುವುದಾದರೆ "ನೀರಜಾಕ್ಷಿ, ಮೀನಾಕ್ಷಿ, ಚಂಚಲಾಕ್ಷಿ, ಮೃಗಾಕ್ಷಿ" ಮೊದಲಾದ ಉಪಮಾನಗಳಿಗೆ ಗುರಿಯಾದ ನಾರಿಯರ ಕಣ್ಣುಗಳೋ?

ಜನ್ಮಗಳಲ್ಲಿ ಶ್ರೇಷ್ಠವಾದದ್ದು ಮನುಷ್ಯಜನ್ಮ. ಮಾನವನ ಅಂಗಾಂಗಗಳಲ್ಲಿ ಪ್ರಧಾನವಾದದ್ದು ತಲೆ. ಐದು ಇಂದ್ರಿಯಗಳಲ್ಲಿ ನಾಲ್ಕು ಇಂದ್ರಿಯಗಳಿಗೆ ನೆಲೆ ತಲೆಯೇ. ತಲೆ "ಕೇಂದ್ರ ಸರಕಾರ" ಇದ್ದ ಹಾಗೆ. ಅಲ್ಲಿನ ಪ್ರಧಾನಿ ಕಣ್ಣು!

ಹೌದು, ಕಣ್ಣುಗಳು ಎಂದ ಕೂಡಲೆ ಮಾನವರ, ಬಾನವರ, ದಾನವರ, ಮೃಗ ಪಕ್ಷಿ ಪ್ರಾಣಿಗಳ, ಮತ್ತು "Photo"ಗಳಲ್ಲಿರುವ ಕಣ್ಣುಗಳ ಚಿತ್ರ ನಮ್ಮ ಕಣ್ಣ ಮುಂದೆ ಮೂಡುತ್ತದೆ. ಕಣ್ಣುಗಳಿಲ್ಲದ ಮುಖ ಚಂದ್ರನಿಲ್ಲದ ಆಕಾಶದಂತೆಯೂ ಸೌರಭವಿಲ್ಲದ ಪುಷ್ಪದಂತೆಯೂ ಕಾಂತಿಹೀನವಾಗಿದ್ದು, ಶೋಭಿಸುವುದಿಲ್ಲ. ಮಾನವನ ನಡೆ-ನುಡಿ, ಆಚಾರ-ವಿಚಾರ, ಸ್ವಭಾವ-ಸ್ವರೂಪಗಳನ್ನೆಲ್ಲಾ ವಿಶ್ವಕ್ಕೆ ಸಾರಿಕೊಡುತ್ತಿರುವ ವಸ್ತುಗಳು ಕಣ್ಣುಗಳು! "Face is the index of mind" ಎನ್ನುವಂತೆ, ಕಂಗಳು ಹೃದಯಭಾವನೆಗಳನ್ನು ಎತ್ತಿ ತೋರಿಸುತ್ತಿರುವ, ಸೃಷ್ಟಿ ಕರ್ತನ ಭವ್ಯಕುಶಲತೆಯ ಕನ್ನಡಿ!

ಕಣ್ಣುಗಳಲ್ಲಿ ನಾನಾ ಬಗೆಯವು ಉಂಟು. ಕಣ್ಣುಗಳ ವಂಶವೃಕ್ಷದಲ್ಲಿ, ಮುಖ್ಯವಾಗಿ ಎರಡು ಶಾಖೆಗಳು: ಸುಲೋಚನ ಸಹಿತವಾದ ಕಣ್ಣುಗಳು; ಸುಲೋಚನ ರಹಿತವಾದ ಕಣ್ಣುಗಳು. ಮತ್ತೆ ಉಪಶಾಖೆಗಳಲ್ಲಿ, ಬೊಗಸೆಗಣ್ಣು, ಮೆಳ್ಳೆಗಣ್ಣು, ಇರುಳುಗಣ್ಣು, ಮಾಲಗಣ್ಣು, ಚೈನಾದೇಶದವರಂತಹ ಕಿರಿಗಣ್ಣು, ಯೂರೋಪಿಯನರ ರೀತಿಯ ವಿದೇಶೀಕಣ್ಣು (ನಮ್ಮವರ ಭಾಷೆಯಲ್ಲಿ ಬೆಕ್ಕಿನ ಕಣ್ಣು) ಮುಂತಾಗಿ ವಿಶ್ವದ ಒಂದು ಕೊನೆಯಿಂದ ಇನ್ನೊಂದು ಕೊನೆಯವರೆಗೆ ಇರುವ ಕಣ್ಣುಗಳೆಲ್ಲಾ ಸೇರಿಹೋಗುತ್ತವೆ. ಈ ಉಪಶಾಖೆಗಳ ಉಪಶಾಖೆಗಳೂ ಅಗಣಿತವಾಗಿ, ಮಾನವನ ಕಲ್ಪನೆಗೆ ಮೀರಿವೆ. ಮಾನವನು ಸದ್ಗತಿ

ಯನ್ನೇರುವುದೂ, ದುರ್ಗತಿಗಿಳಿಯುವುದೂ, ಸಜ್ಜನ ಅಥವಾ ದುರ್ಜನನೆನಿಸು ವುದೂ ಈ ಕಣ್ಣುಗಳಿಂದಲೇ! ಉತ್ತಮ, ಮಧ್ಯಮ, ಅಧಮಾವಸ್ಥೆಗಳಿಗೆ ಒಳಗಾಗುವುದೂ ಇವುಗಳ ಮಹಿಮೆಯಿಂದಲೇ!

ಎಂದ ಮೇಲೆ 'ನಾನು ಕಂಡಿರುವ ಕಣ್ಣುಗಳು' ಎಂಬುದು 'ನಾನು ಕಂಡಿರುವ ಜನರ ಗುಣ, ಸ್ವರೂಪ, ರೀತಿ-ನೀತಿ, ವೈಚಿತ್ರ, ಚಾರಿತ್ರಗಳೇನು?' ಎಂಬುದರ 'ಸಂಕ್ಷಿಪ್ತ ರೂಪ' ಆಯಿತು. ಏಕೆಂದರೆ ಕಣ್ಣುಗಳೇ ಮಾನವನ ಇಡೀ ಬಾಳನ್ನು ಚಿತ್ರಿಸುವ "Camera" ಇದ್ದಂತೆ. ಹಾಗಾದರೆ ನಾನು ಕಂಡಿರುವ ವ್ಯಕ್ತಿಗಳಾರು? ವ್ಯಕ್ತಿಯೆಂದ ಕೂಡಲೆ, ಇಡೀ ಜಗತ್ತಿಗೇ ಮಹಾ ವ್ಯಕ್ತಿಗಳಾದ ಬಾಪೂಜಿಯವರ ನೆನಪು ಹೊಳೆಯುತ್ತದೆ. ಆದರೆ ಅವರನ್ನು ಕಣ್ಣಾರೆ ಕಾಣುವ ಸೌಭಾಗ್ಯ ನಮಗಿಲ್ಲದಂತೆ ನಾವು ಕಿರಿಯರಾದದ್ದು ನಮ್ಮ ದೌರ್ಭಾಗ್ಯ. ಯಾರೋ ಒಬ್ಬ ಶ್ರೀಕೃಷ್ಣಭಕ್ತರು, ಆ ಮುರಳೀಧರನ ಪಾಲನೆಯಲ್ಲಿದ್ದ ಗೋವುಗಳಲ್ಲೊಂದು ಗೋವಾಗಿಯಾದರೂ ನಾನು ಹುಟ್ಟಬಾರ ದಾಗಿತ್ತೆ? ಕೊನೆಯ ಪಕ್ಷ ಆ ದ್ವಾಪರಯುಗದ ದ್ವಾರಕಾವತಿಯ ಹುಲ್ಲು ಗಾವಲಿನ ಒಂದು ಹುಲ್ಲುಗರಿಕೆಯಾಗಾದರೂ ಆಗಬಾರದಾಗಿತ್ತೆ?' ಎಂದು ಹಂಬಲಿಸುತ್ತಿದ್ದರಂತೆ! ಹಾಗೆಯೇ ನಾವೂ ಹಲುಬಬೇಕಾಗುತ್ತದೆ. ಆದರೇನು? ಜಲ, ತನ್ನ ಅನಿಲಗಳನ್ನು ಮುಷ್ಟಿಯಲ್ಲಿ ಹಿಡಿದು, ಅವುಗಳ ಮೇಲೆ ಸರ್ವಾಧಿ ಕಾರವನ್ನು ಸ್ಥಾಪಿಸಿರುವ ಮಾನವನಿರ್ಮಿತ ವಿಜ್ಞಾನವಿಲ್ಲವೆ? ವಿಜ್ಞಾನದ ವರಪ್ರಸಾದ "Photo" ಗಳಿಲ್ಲವೆ? ಕೆಲವು ವೇಳೆ, ಕೆಲವು "Photo"ಗಳಲ್ಲಿ, ಆಯಾ ವ್ಯಕ್ತಿಯ ಗುಣಗಳಿಗೆ ವಿರುದ್ಧವಾದ ಗುಣಗಳ ಚಿತ್ರವೇ ಮೂಡಿರು ತ್ತದೆ. ಆದರೆ ಸರ್ವಸಾಧಾರಣವಾಗಿ ಬಾಪೂಜಿಯ ಚಿತ್ರಗಳು ಈ ದೋಷಕ್ಕೆ ಹೊರತಾಗಿವೆ. ಆ ಕಣ್ಣುಗಳಲ್ಲಿ ಅಲೌಕಿಕ ತೇಜಸ್ಸು, ಅನಿರ್ವಚನೀಯ ಶಾಂತಿ, ಅಹಿಂಸೆ ತ್ಯಾಗಗಳ ಹೊಳಪು, ವಿಶ್ವಪ್ರೇಮ, ಭ್ರಾತೃಪ್ರೇಮ, ಸ್ವದೇಶ ಪ್ರೇಮ, ಎಂಬ ಅಮೂಲ್ಯ ರತ್ನಗಳ ಭಂಡಾರವೇ ಹುದುಗಿದೆ.

'ಸಜ್ಜನರ ಸಂಗವದು ಹೆಜ್ಜೇನು ಸವಿದಂತೆ' ಎಂದು ಹೇಳಿದಾಗ ಸರ್ವಜ್ಞ ಮೂರ್ತಿ ತನ್ನ ಬಿರುದನ್ನು ಮರೆತಿರಬೇಕು. ಇಲ್ಲವೆ, "ಎಲ್ಲ ಬಲ್ಲವರಿಲ್ಲ" ಎಂದು ತನಗೆ ತಾನೇ ಸಮಾಧಾನ ಹೇಳಿಕೊಂಡಿರಬೇಕು. ಸಜ್ಜನರ ಸಂಗ, ಶುಶ್ರೂಷೆ, ತಂತಿಯ ಮೇಲೆ ನಡೆದಂತೆ. ತೂಕ ತಪ್ಪಿದರೆ ಮುಗಿಯಿತು. ಅದು

ಅಸಿಧಾರಾವ್ರತ; ಅಲ್ಲಿ ಅಗ್ನಿಪರೀಕ್ಷೆಯೇ ಸರಿ. ಅದರಲ್ಲೂ ಗಾಂಧೀಜಿ, ಬಂಗಾರಕ್ಕೆ ಬಣ್ಣ ಕೊಡಲು ಪುಟಕ್ಕೆ ಹಾಕುವಂತೆ, ಸಂಗಾತಿಗಳನ್ನು ಪುಟಕ್ಕೆ ಹಾಕುವವರು. ಆ ಸಂಕಟದಲ್ಲೂ ಸಿದ್ಧಿ ಇದೆ, ಆ ಪುಟದಲ್ಲಿ ಶುದ್ಧಿ ಇದೆ. ಇಂತಹ ಮಹಾಪುರುಷರ ಬಳಿ, ಹಗಲಿರುಳೂ "ಮುಳ್ಳು ಪಾಲಕಿಯ ಸೇವೆ" ಮಾಡುತ್ತಿದ್ದ ಕಸ್ತೂರಿಬಾರವರ ಸ್ಥಿತಿ ಹೇಗಿರಬೇಕು? ಬಾರವರದು ಸರಲ ವಾದ, ಸೌಜನ್ಯತಾಯುಕ್ತವಾದ, ಗಾಂಭೀರ್ಯದಿಂದೊಡಗೂಡಿದ ಮುಖ ಮುದ್ರೆ. ಆ ಮುಖದ ನಡುವೆ, "ಇಡೀ ಪೃಥ್ವಿಯನ್ನೇ ತಮ್ಮ ಶಿಶುವಿನಂತೆ ಭಾವಿಸಿರುವ ಜಗನ್ಮಾತೆಯ ವಾತ್ಸಲ್ಯ, 'ಸೋಲಿನಿಂದಲೇ ಗೆಲುವುಂಟೆಂಬ' ತಾರಕಮಂತ್ರದ ಅನುಭವಾಮೃತ, ಮೂಕ ಜಂಗುಳಿಯ ಪ್ರತಿನಿಧಿಯಾಗಿ, ವಿಶ್ವಮಾರ್ಗದರ್ಶಕರಾದ ತಮ್ಮ ಪತಿಗೇ ಅಹಿಂಸೆಯನ್ನು ಬೋಧಿಸಿರುವ ವೀರ ಸತಿಯ ಅಸಾಧಾರಣ ಕ್ಷಮೆ, ತಾಳ್ಮೆ, ಸಹನಗಳ ಮೂರ್ತಿವೆತ್ತ ರೂಪಿನಂತೆ ಹೊಳೆಯುತ್ತಿರುವ ಕಣ್ಣುಗಳು.

ಗಾಂಧೀಜಿ ಸತ್ಯಾನ್ವೇಷಣೆಯಲ್ಲಿ, ಜಕಣಾಚಾರಿ ಕಲ್ಲಿನಲ್ಲಿ, ರಾಣಿ ಮೀರಾ ಬಾಯಿ ಭಕ್ತಿಯ ಸಾಕ್ಷಾತ್ಕಾರದ ಅನುಭವದಲ್ಲಿ, ಕಾಲಿದಾಸ ಭವಭೂತಿಗಳು ಸಾಹಿತ್ಯ ಕೃತಿಗಳಲ್ಲಿ, ತ್ಯಾಗರಾಜ ತಾನಸೇನರು ನಾದದಲ್ಲಿ, ಉದಯಶಂಕರರು ನಾಟ್ಯದಲ್ಲಿ, ವೆಂಕಟಪ್ಪನವರು ಚಿತ್ರಗಳಲ್ಲಿ ಚೆಲುವನ್ನು ಅರಸಿದರೆ, ರವೀಂದ್ರ ನಾಥ ಠಾಕೂರರು, ಕಾವ್ಯದೇವಿಯ ಆರಾಧನೆಯಲ್ಲಿಯೇ ಆ ಚೆಲುವಿನ ಸಾಕ್ಷಾತ್ಕಾರವನ್ನು ಪಡೆದರು. ಅವರ ವಿಶಾಲವಾದ ಕಣ್ಣುಗಳು 'ಉದಾತ್ತ ಜೀವನವೇ ಶ್ರೇಷ್ಠವಾದ ಕಲೆ' ಎಂಬುದರ ಪ್ರತ್ಯಕ್ಷ ಸ್ವರೂಪವನ್ನು, ಸಾಹಿತ್ಯ 'ಜನಜೀವನದ ಚಿಲುಮೆಯನ್ನು ಬತ್ತಿಸದೆ ಉಕ್ಕಿಸುವಂಥ, ಹಣವಂತರಿಗೆ ಮಾತ್ರ ಸಿಗುವ ಕೇಸರಿ ಕರ್ಪೂರ ಬೆರಸಿದ ದೇವರ ತೀರ್ಥವಾಗದೆ, ಜಗತ್ತಿನ ಇಡೀ ಚರಾಚರ ಜೀವಕೋಟಿಗೆ ತಂದುಕೊಡುವ ಮಳೆನೀರಿನಂತೆ ಆಗಬೇಕು' ಎಂಬುದರ ಸಾರ್ಥಕತೆಯನ್ನು, ಶಾಂತಿನಿಕೇತನದ ಶಾಂತಮೂರ್ತಿಯ, ಪ್ರಶಾಂತ ವಾತಾವರಣದ ಶಾಂತಿಸ್ವರೂಪವನ್ನು ಪ್ರತಿಬಿಂಬಿಸುವ ದರ್ಪಣ ದೋಪಾದಿಯಲ್ಲಿ ಕಂಗೊಳಿಸುತ್ತಿವೆ.

ಇದಿಷ್ಟೂ ಚಿತ್ರಪಟಗಳಲ್ಲಿ, ತೈಲಚಿತ್ರಗಳಲ್ಲಿ ನೋಡಿರುವ ನಯನಗಳ ವಿಷಯವಾಯಿತು. ಆದರೆ ಪ್ರತ್ಯಕ್ಷಾನುಭವವೇ ಅತ್ಯಂತ ಉತ್ಕೃಷ್ಟವಾದುದು.

ನಾನು ಕಣ್ಣಾರೆ ಕಂಡಿರುವ ಮಹಾವ್ಯಕ್ತಿಗಳಲ್ಲಿ ಭಾರತದ ಹಿತಕಾರಿ, ಧನ ಕನಕವಸ್ತುಗಳ ಸರ್ವ ಸುಖಭೋಗಗಳನ್ನು ತುಚ್ಛವೆಂದೆಣಿಸುತ್ತ, ತರುಣರಿಗೆ ಗುರುವಾಗಿ, ದೇಶಕ್ಕೆ ದೊರೆಯಾಗಿ, ಬೆಳಗುತ್ತಲಿರುವ ಜವಹರಲಾಲ್ ನೆಹರೂ ರವರೂ ಒಬ್ಬರು; ಅವರ ಅಕ್ಷಿದ್ವಯಗಳು ಅವರ ವ್ಯಕ್ತಿತ್ವದಷ್ಟೇ ಮಹತ್ವ ದಿಂದ ಕೂಡಿರುವಂತಹವು. ಅವರ ಆ ಮಹಿಮಾನ್ವಿತ ನಯನಗಳೆರಡೂ "ಅಸಂಖ್ಯಾತ ದೇಶೀಯರ ಅಜ್ಞಾನ, ದಾರಿದ್ರ್ಯಗಳನ್ನು ಕಂಡು ಉಕ್ಕೇರುವ ಸಹಾನುಭೂತಿಯ ರೋಷದಿಂದ ಆ ದಾರಿದ್ರ್ಯರೂಪೀ ಉತ್ತುಂಗ ತರಂಗ ಮಾಲೆಗಳ ಸೆಳವಿನೆದುರಿಗೆ ನಿಂತು ಸೆಣಸಾಡಬೇಕೆಂಬ ಆತ್ಮಬಲ ಅಭಿಮಾನಗಳ ಕೆಚ್ಚು; ಕೀರ್ತಿಪ್ರತಿಷ್ಠೆಗಳ ವ್ಯಾಮೋಹಕ್ಕೊಳಗಾಗದೆ ತ್ಯಾಗದ ಭೂಮಿಕೆಯ ಮೇಲೆ ಜೀವನ ಭವನವನ್ನು ಕಟ್ಟಬೇಕೆಂಬ ನಿರ್ಧಾರ; ಪಾಂಡಿತ್ಯ, ಲಾಲಿತ್ಯ, ಹೃದಯ ವೈಶಾಲ್ಯ, ವಿಶ್ವಬಾಂಧವ್ಯ ಮುಂತಾದ ಸದ್ಗುಣಗಳೆಂಬ ಹಿಮಬಿಂದು ಗಳನ್ನು ಧರಿಸಿರುವ ನೀರಜಾತದೋಪಾದಿಯಲ್ಲಿ ಶೋಭಾಯಮಾನವಾಗಿದೆ.

ಮಹಾವ್ಯಕ್ತಿಗಳ ಶ್ರೇಣಿಯಲ್ಲಿ ಅಗ್ರಗಣ್ಯರಾಗಿ, ದೇಶದ ಹಿತ ಕಾರ್ಯದಲ್ಲಿ ಕಂಕಣವನ್ನು ಕಟ್ಟಿ, ನೂರಾರು ಜೀವಿಗಳಿಗಾಸರೆಯಾಗಿ, ಸರಳ ಮತ್ತು ಶುದ್ಧ ಸಾತ್ತ್ವಿಕ ಜೀವನಾವಲಂಬಿಗಳಾದ ನಮ್ಮ ರಾಷ್ಟ್ರಾಧ್ಯಕ್ಷ ರಾಜೇಂದ್ರ ಪ್ರಸಾದರವರು, ಬೆಂಗಳೂರಿಗೊಮ್ಮೆ ಆಗಮಿಸಿ ತಮ್ಮ "ಎಲೆಯ ಮರೆಯ ಕಾಯಿಯಂತೆ" ಆಡಂಬರರಹಿತವಾದ ಸೇವಾಮನೋಭಾವ, ಜಗತ್ತಿ ಗೆಲ್ಲಾ ಆದರ್ಶವಾದ ಬಾಳ್ವೆ ನಡಸುತ್ತಿರುವ ಅವರ ಉದಾಹರಣೆ, ಮೇಧಾವಿತ್ವ, ಮೃದುತ್ವ, ಗಂಭೀರತೆಗಳ ಆಗರವಾದ ಎರಡು ಕಣ್ಣುಗಳ ವಚಸ್ಸನ್ನು, ತಮಗರಿವಿಲ್ಲದೆಯೇ ಜನರ ಮನಸ್ಸಿನ ಮೇಲೆ ಬೀರಿದ್ದಾರೆ.

ಮಾಸ ಮಾಸವೂ ದ್ರವ್ಯ ಕರೆಯುತಲಿದ್ದ ಕಲ್ಪವೃಕ್ಷದ ತೆರದ ಕೆಲಸವನ್ನು ತ್ಯಜಿಸಿ, ಬಡತನವೆಂಬ ಬಡಬಾಗ್ನಿಗೆ ತುತ್ತಾಗಿ, ತೊಳಲಾಡುತ್ತಿರುವ ಭಾರತದ ಜನಜಂಗುಳಿಗಾಗಿ ತಮ್ಮ ಜೀವಮಾನವನ್ನು ಧಾರೆಯೆರೆದು, ಭಾರತದ ಇತಿಹಾಸರೂಪೀ ಆಗಸದಲ್ಲಿ ಒಂದು ಉಜ್ವಲ ತಾರೆಯಂತೆ ಮಿನುಗಿ, ಭಾರತ ಮಾತೆಯ ಚರಣಾಂಬುಧಿಯನ್ನು ಹೊಕ್ಕ ಸರದಾರ್ ವಲ್ಲಭಭಾಯಿ ಪಟೇಲರ ವ್ಯಕ್ತಿತ್ವದಷ್ಟೇ ಅವರ ನಯನಗಳೂ ಹಿರಿಮೆಯುಳ್ಳವು. ಆ ಮಹೋನ್ನತ ನಯನರೂಪೀಸಾಗರದಲ್ಲಿ, "Iron man (ಉಕ್ಕಿನಂತಹ ಮನುಷ್ಯ)" ಎಂಬ

ಹೆಸರನ್ನು ಸಾರ್ಥಕಪಡಿಸುವ ವಜ್ರಸಂಕಲ್ಪದ ದೃಢಮನಸ್ಸು, ಸ್ಥಿರ ಸಂಕಲ್ಪ, ಸೇವಾಮನೋಭಾವ, ಅಂಬುಧಿಗಿಂತಲೂ ವಿಶಾಲವಾದ ಹೃದಯ, ವಿಶ್ವ ಕುಟುಂಬ ಪ್ರೇಮ, ಮುಂತಾದ ಅನರ್ಘ್ಯರತ್ನಗಳು, ಮುತ್ತು ಹವಳಗಳು, ಅವರ ವಿನಯ, ಸೌಜನ್ಯ ಎಂಬ ತಿಳಿನೀರ ಒಳಗಡೆ ಅಡಗಿವೆ.

ಮತ್ತೊಬ್ಬ ಅಂತರರಾಷ್ಟ್ರೀಯ ಮಹಾಮಹಿಳೆ ಶ್ರೀಮತಿ ವಿಜಯಲಕ್ಷ್ಮಿ ಪಂಡಿತ್. ಈ ವಿಶಾಲವಿಶ್ವವೆಂಬ ಮೇರುಪರ್ವತದ ತುತ್ತ ತುದಿಯ ಶಿಖರವನ್ನೇರಿ, ಅಲ್ಲಿ ಭಾರತಕೀರ್ತಿಪತಾಕೆಯನ್ನು ಹಾರಿಸಿ, ಭಾರತದ ಹಿರಿಮೆ, ಆದರ್ಶ, ಅಹಿಂಸೆ, ತ್ಯಾಗ, ಸೇವೆಯೆಂಬ ಪರಿಮಳವನ್ನು ಜಗತ್ತಿನಲ್ಲೆಲ್ಲಾ ಬೀರುತ್ತಿರುವ ಕಾರ್ಯಸಾಧಕರು ಅವರು. ಅವರ ಅಕ್ಷಿದ್ವಯಗಳು, ಕೀರ್ತಿ ಸೂರ್ಯನನ ಕಿರಣಗಳಂತೆ, ಶಾಂತಿ, ಪ್ರೇಮ, ಸಹೃದಯತೆ ಮುಂತಾದ ದೈವೀಗುಣಗಳ ಪ್ರಕಾಶವನ್ನು ಹೊರಚೆಲ್ಲುತ್ತವೆ. ಭಾರತದ ಭವ್ಯ ಭವಿತವ್ಯದ ಶಿಖರವನ್ನು ಹತ್ತಿರುವ ಸ್ತ್ರೀಯರ ಕುಲಕ್ಕೆ ಕೀರ್ತಿಪ್ರಾಯರಾಗಿರುವ ಅವರ ಹಿರಿಮೆಯನ್ನು ಯಾರು ತಾನೆ ಮೆಚ್ಚಲಿಕ್ಕಿಲ್ಲ?

ಮತ್ತೆರಡು ಪ್ರತಿಭಾನ್ವಿತ ಕಣ್ಣುಗಳ ವ್ಯಕ್ತಿಚಿತ್ರವೊಂದು ನನ್ನ ಮನಸ್ಸಿನ ಮೇಲೆ ವಿಶೇಷ ಪ್ರಭಾವವನ್ನು ಬೀರಿದೆ. ಆ ತಪಸ್ವಿಗಳು ಬಿ. ಎಂ. ಶ್ರೀಕಂಠಯ್ಯನವರು. "ಕಂಗಳಿದ್ಯಾತಕೋ ಬಿ. ಎಂ. ಶ್ರೀಯವರ ನೋಡದಾ" ಎಂದು ಅವರನ್ನು ಕಣ್ಣಾರೆ ಕಾಣದುದಕ್ಕೆ ವಿಷಾದಿಸಬೇಕಾಗಿದೆ. ನಮ್ಮ ಕನ್ನಡ ತರಗತಿಗೆ ಪ್ರವೇಶಿಸಿ, ನಮ್ಮ ನಮ್ಮ ಸ್ಥಾನಗಳಲ್ಲಿ ಆಸೀನರಾದ ಕೂಡಲೆ ಪ್ರಪ್ರಥಮವಾಗಿ ನಮಗೆ ಗೋಚರವಾಗುವುದು: ಶ್ರೀಯವರ ಭಾವ ಚಿತ್ರ. ಸಾಹಿತ್ಯದೇವಿಯ ಅಡಿದಾವರೆಗಳಲ್ಲಿ ಭಕ್ತಿಪುರಸ್ಸರವಾಗಿ ಅರ್ಪಿಸಿದ ಒಂದು ಬಿಡಿಪುಷ್ಪ ನಮಗೆ ಪಠ್ಯಪುಸ್ತಕವಾಗಿರುವ "ಅಶ್ವತ್ಥಾಮನ್" ಎಂಬ ರುದ್ರನಾಟಕ. ಅವರ ಭಾವಚಿತ್ರದ ಎದುರಿಗೆ ಕುಳಿತು, ಅವರ ಕಾವ್ಯದ ರಸಾನಂದವನ್ನು ಸವಿಯುವ ಭಾಗ್ಯ ನಮ್ಮ ಕಾಲೇಜಿನ ವಿದ್ಯಾರ್ಥಿ ಗಣಕ್ಕೆ ಲಭಿಸಿದೆ. ಅವರ ಚಿತ್ರಪಟದಲ್ಲಿ ಅತ್ಯಂತ ಪ್ರತಿಭಾವಂತವಾದದ್ದು ಅವರ ಆ ಎರಡು ತೇಜಃಪುಂಜವಾದ ಕಣ್ಣುಗಳು. ವಿದೇಶೀ ಸಭ್ಯತೆಯೆಂಬ ಸೈಕ್ಲೋನ್‌ಗಳ ಸುಳಿಗೆ ಸಿಕ್ಕಿ, ದಾರಿಗಾಣದೆ, ದಿಕ್ಕೆಟ್ಟು, ಅಜ್ಞಾನಾಂಧ ಕಾರದಲ್ಲಿ ಮುಳುಗಿ, ಜನ್ಮದಾತೆಯನ್ನೇ ಮರೆತು, ಘೋರ ತಿಮಿರಾವಳಿಯಲ್ಲಿ

ಮುಸುಕಿದ್ದ ಕನ್ನಡಿಗರನ್ನು "ಕನ್ನಡದ ಸೇವೆ" ಎಂಬ ಜ್ಞಾನಜ್ಯೋತಿಯಿಂದ ಮೇಲೆಬ್ಬಿಸಿ, ಅದಕ್ಕಾಗಿ ತಮ್ಮ ಇಡಿಯ ಬಾಳ್ವೆಯನ್ನೇ ಕನ್ನಡತಾಯಿಯ ಚರಣಕಮಲಗಳಲ್ಲಿ ಅರ್ಪಿಸಿ, ಸುವರ್ಣಾಕ್ಷರದಲ್ಲಿ ಬರೆದಿಡುವಂತಹ ಅವರ ಕಾರ್ಯಗಳ ಇತಿಹಾಸವನ್ನೆಲ್ಲಾ ಆ ಎರಡೇ ಎರಡು ಕಣ್ಣುಗಳು ಜಗತ್ತಿಗೆ ಸಾರುತ್ತಿವೆ. ಅವರ ಆ ಕಣ್ಣುಗಳ ವೈಭವ, ಸೊಬಗು, ನಿಶ್ಚಯವಾಗಿಯೂ ಸ್ಫೂರ್ತಿದಾಯಕ, ಚೈತನ್ಯದಾಯಕ.

ನಮ್ಮ ಜೀವನವೆಂಬ ನಾಟಕದಲ್ಲಿ ಕೇವಲ ಹಿರಿಯ ವ್ಯಕ್ತಿಗಳಷ್ಟೇ ಅಲ್ಲ, ಕಿರಿಯ ವ್ಯಕ್ತಿಗಳೂ ಪ್ರವೇಶಿಸಿದ್ದಾರೆ. ಪ್ರೈಮರಿ ಪಾಠಶಾಲೆಯ ಒಂದು ಘಟನಾಚಿತ್ರ ಆಗಾಗ ನನ್ನ ಕಂಗಳೆದುರಿಗೆ ಸುಳಿಯುತ್ತಿರುತ್ತದೆ. ಆದಿನ ಒಬ್ಬ ಉಪಾಧ್ಯಾಯರ ಗಣಿತದ ತರಗತಿ. ಆ ಉಪಾಧ್ಯಾಯರೋ ಬಡತನವೇ ಮೂರ್ತಿವೆತ್ತು ಬಂದಿದೆಯೋ ಎಂಬಂತಿರುವವರು. ಅವರ ಎರಡು ಕಣ್ಣುಗಳೂ ದುಃಖ, ಬಡತನ, ಶೋಕ, ಕಷ್ಟಕಾರ್ಪಣ್ಯಗಳ ಜಂಜಾಟಕ್ಕೆ ಸಿಲುಕಿ, ಪ್ರಪಂಚದಲ್ಲಿರುವ ಎಲ್ಲ ಶೋಕವೂ ಅವರ ಎರಡು ಕಣ್ಣುಗಳೆಂಬ ಮಡುಗಳಲ್ಲಿ ಅಡಗಿದೆಯೇನೋ ಎಂಬ ಭಾವವನ್ನು ವ್ಯಕ್ತಿಪಡಿಸುತ್ತಿದ್ದುವು. ಆ ದಿನ ಇದ್ದಕ್ಕಿದ್ದಂತೆ, ಬಡಮಾಸ್ತರುಗಳಿಗೆ ಯಮನಿಗಿಂತಲೂ ಹೆಚ್ಚಿನ ಭಯವನ್ನುಂಟುಮಾಡುವ "ಇನ್‌ಸ್ಪೆಕ್ಟರ್"ರವರ ಸವಾರಿ ಚಿತ್ತೈಸಿತು. ಬಂದವರೇ ಹುಡುಗಿಯರನ್ನೆರಡು ಪ್ರಶ್ನೆಹಾಕಿ ಸಮರ್ಪಕವಾದ ಉತ್ತರವನ್ನೇನೋ ಪಡೆದರು. ಆದರೆ ಯಾವುದೋ ಒಂದು "attendance"ನ ವಿಷಯಕವಾದ ತಪ್ಪಿಗೆ 'ಕ್ರೋಧಾತ್ಮಪರವಶ'ರಾಗಿ ಬಡಮಾಸ್ತರರ ಮೇಲೆ ರೇಗಾಡಿದರು. ಅವರ ಕಣ್ಣುಗಳಲ್ಲಿ, ತಿರಸ್ಕಾರ, ದರ್ಪ, ಠೀವಿ, ಮುಂತಾದ ಅಮಾನುಷ ಗುಣಗಳು ಅಗ್ನಿಕಣಗಳಂತೆ ಭಯಂಕರವಾಗಿ ಹೊಳೆಯುತ್ತಿದ್ದುವು. ಇದನ್ನು ನೋಡಿದರೆ, ಮಾಸ್ತರರ ಮತ್ತು ಇನ್‌ಸ್ಪೆಕ್ಟರರ ಕಣ್ಣುಗಳಲ್ಲಿನ ತಾರತಮ್ಯವನ್ನು ಗಮನಿಸಿದರೆ "ಮಾನವ ಮಾನವರ ನಡುವೆ ಭೇದಭಾವದ ಗೋಡೆಗಳು ನಿಂತುಬಿಟ್ಟಿವೆ. ನಾವು ಪರಸ್ಪರ ದುಃಖಗಳಲ್ಲಿ ಭಾಗವಹಿಸಬೇಕೆಂಬ ಮಾನವ ಧರ್ಮವನ್ನು ಮರೆತುಬಿಟ್ಟಿದ್ದೇವೆ. ಸ್ನೇಹ ಮತ್ತು ಸಹಾನುಭೂತಿ ಎಂಬ ಶ್ರೇಷ್ಠಮಾನವೀಯ ಗುಣಗಳು ಈಗ ಮೂರ್ಖತೆಯ ಲಕ್ಷಣಗಳೆಂದು ಪರಿಗಣಿಸಲ್ಪಡುತ್ತಿವೆ. ಶಕ್ತಿ, ಮತ್ತು ಧನವನ್ನು ಹೊಂದಿರುವವರ ಹೃದಯದಿಂದ

ಮನುಷ್ಯತ್ವವೇ ನಷ್ಟವಾಗಿದೆಯೇನೋ ಎನ್ನಿಸುತ್ತದೆ” ಎಂಬ ಕವಿಯ ಮಾತು ಅಕ್ಷರಶಃ ಸತ್ಯ.

ಕಣ್ಣುಗಳಲ್ಲಿ ಕೆಲವರ ಕಣ್ಣು ಅತ್ಯಂತ ರಕ್ತವರ್ಣಕ್ಕೆ ತಿರುಗಿದ್ದು, ನೋಟಕರಲ್ಲಿ ನಡುಕವನ್ನು ಹುಟ್ಟಿಸುವಂತಿರುತ್ತವೆ. ಅಂತಹವರನ್ನು ನೋಡಿದರೆ ಚಲನಚಿತ್ರಗಳ ಕೆಲವು ಖಳನಾಯಕ ಪಾತ್ರಧಾರಿಗಳ ನೆನವುಂಟಾಗುತ್ತದೆ. ಮತ್ತೆ ಕೆಲವರ ಕಣ್ಣುಗಳು, ಮಾದಕಪದಾರ್ಥಗಳ ಸೇವನೆಯಿಂದ, ತಮ್ಮ ತೇಜಸ್ಸನ್ನು ಕಳೆದುಕೊಂಡು, ಉನ್ಮತ್ತವಾಗಿರುತ್ತವೆ. ಮತ್ತೆ ಕೆಲವು ಕಾಳಸಂತೆ ವರ್ತಕರ ಕಣ್ಣುಗಳು, ಅವರ ಆಶೆ, ಮೋಸ, ವಂಚನೆ ಮುಂತಾದ ವಿಜಾತೀಯ ಗುಣಗಳನ್ನೇ ಪ್ರತಿಬಿಂಬಿಸುತ್ತಿರುತ್ತವೆ. ಹಾಗೆಯೇ ಮಾಲೀಕರ ಮತ್ತು ಕಾರ್ಮಿಕರ ಕಣ್ಣುಗಳೊಳಗಿನ ತಾರತಮ್ಯ: ಬಡವರ ರಕ್ತವನ್ನು ಹೀರಿ, ಅನೇಕ ಬಡಬಗ್ಗರ ಶ್ರಮ, ಬೆವರು, ದುಡಿತಗಳನ್ನೇ ತಮ್ಮ ಗಗನಚುಂಬಿ ಹರ್ಮ್ಯಗಳ ಅಡಿಪಾಯದ ಕಲ್ಲುಗಳನ್ನಾಗಿ ಮಾಡಿಕೊಂಡಿರುವ ಅವರ ಅತ್ಯಾಶೆ, ನಿರ್ದಯ, ಕಾಠಿನ್ಯಗಳನ್ನು, ಅವರ ಮಹಲುಗಳಲ್ಲಿ ಗಹಗಹಿಸಿ ನಗುತ್ತಿರುವ ಆಲಸ್ಯವನ್ನು, ಶ್ರೀಮಂತರ, ಮಾಲೀಕರ ಕಣ್ಣುಗಳು ಪ್ರತಿಬಿಂಬಿಸುತ್ತಿರುತ್ತವೆ. ಅದೇ ಕಾರ್ಮಿಕರ ಅಕ್ಷಿಗಳಲ್ಲಿ, ಯಂತ್ರದೊಡನೆ ಯಂತ್ರಗಳಾಗಿ, ತಮ್ಮ ಅಸ್ತಿತ್ವವನ್ನೇ ಮರೆತು, ಹಿಡಿ ಅನ್ನಕ್ಕಾಗಿ, ಇಡೀ ಜೀವನದ ಬಲಿದಾನವನ್ನರ್ಪಿಸುತ್ತಿರುವ ಅವರ ನಿಸ್ಸಹಾಯ ಕರಣೋತ್ಪಾದಕ ದೈನ್ಯತೆ ಪ್ರತಿರೂಪಿಸುತ್ತಿರುತ್ತಿದೆ.

ದ್ವಿಪಾದಿಗಳಾದ ಮಾನವರ ಕಣ್ಣುಗಳಿಗಿಂತಲೂ ಚತುಷ್ಪಾದಿಗಳ ಕಣ್ಣುಗಳ ಭಾವೋದ್ರೇಕ ನಮ್ಮ ಗಮನವನ್ನು ಹೆಚ್ಚಾಗಿ ಸೆಳೆಯುತ್ತದೆ. ತನಗೆ ಅನ್ನವಿಟ್ಟ ಒಡೆಯನಿಗಾಗಿ, ತನ್ನ ಪ್ರಾಣವನ್ನಾದರೂ ಕೊಟ್ಟು ರಕ್ಷಿಸುತ್ತೇನೆಂಬ ಕೃತಜ್ಞತಾಭಾವವನ್ನು ಹೊರಸೂಸುತ್ತಿರುವ ನಾಯಿಯ ಕಣ್ಣುಗಳ ಪರಿಚಯ ಯಾರಿಗಿಲ್ಲ? ಹಾಗೆಯೇ ಹಸುಗಳು, ತಾವು ಸೊಪ್ಪೋ ಸೆದೆಯೋ ಹುಲ್ಲೋ ಕಡ್ಡಿಯೋ ಮೇದು, ಮಾನವನಿಗೋಸ್ಕರ ಅವನ ಪ್ರಾಣಾಧಾರವಾದ ಅಮೃತರೂಪದ ಹಾಲನ್ನು ಕೊಡುತ್ತಿರುವ ಗೋಮಾತೆಯ ಪರೋಪಕಾರತೆಯ ಪರಾಕಾಷ್ಠತೆ ಅದರ ಕಣ್ಣುಗಳಲ್ಲಿದೆ. ತನ್ನ ಮಾಲಿಕನಿಗಾಗಿ ಹಗಲಿರುಳೂ ನೊಗದ ಭಾರವನ್ನು ಹೊತ್ತು, ಜೊತೆಗೆ ಪೆಟ್ಟುಗಳನ್ನು ತಿಂದು,

ಹಾಗೂ ಮನುಷ್ಯನಿಗೆ ಶ್ರೇಯಸ್ಸನ್ನೇ ಕೋರುವ ದನಗಳ ಹಿರಿಮೆಯನ್ನು ಅರಿಯದವರಾರು? ಹಾಗೆಯೇ ಇತರ ಮೃಗ ಪಕ್ಷಿಗಳೂ, ತಮ್ಮ ತಮ್ಮ ಹೃದಯದ ಭಾವನೆಗಳನ್ನು, ತಮ್ಮ ಕಣ್ಣುಗಳ ಮೂಲಕ ಹೊರಚೆಲ್ಲುತ್ತವೆ.

ಕಣ್ಣುಗಳೆಂದರೆ ಬದುಕಿರುವವರ ಕಣ್ಣುಗಳೇ ಅಲ್ಲದೆ ಮರಣ ಹೊಂದಿರುವವರ ಕಣ್ಣುಗಳೇಕಾಗಬಾರದು? ಆದರೆ ಸತ್ತವರ ಕಣ್ಣುಗಳನ್ನು ಮಾತ್ರ ನೋಡಬಾರದು. ಕೆಲವರು ಕಣ್ಣುಗಳನ್ನು ಮುಚ್ಚಿಕೊಂಡು ಪರಲೋಕ ಯಾತ್ರೆಗೆ ತೆರಳಿರುತ್ತಾರೆ. ಒಂದು ಸಲ ವಿಕೃತವಾದ ಕಣ್ಣುಗಳುಳ್ಳ ಶವವನ್ನು ನೋಡಿ ಬಹಳ ಹೆದರಿದ್ದೆ. ಕನಸಿನಲ್ಲೆಲ್ಲಾ ಅದರ ಚಿತ್ರವೇ ಬರುತ್ತಿತ್ತು. ಅದು ಇನ್ನೂ ನನ್ನ ನೆನಪಿನಿಂದ ಅಳಿಸಿಲ್ಲ. ಅಳಿಸಲಾಗುವುದೂ ಇಲ್ಲ.

ಕಣ್ಣುಗಳಲ್ಲಿ ಕೃತಕ ಕಣ್ಣುಗಳು ಬೇರೆ ಇರುತ್ತವೆ. ಇವಲ್ಲದೆ ಕನ್ನಡಕಗಳು! ಒಬ್ಬೊಬ್ಬರ ಮುಖಾಕೃತಿಗೆ ಒಂದೊಂದು ಬಗೆಯ ಸುಲೋಚನ. ಅವುಗಳಲ್ಲಿಯೂ ನಾನಾ ವಿಧಗಳಿವೆ. ದಪ್ಪದಪ್ಪದ "ಫೈಲು"ಗಳನ್ನು ಕಂಕುಳಲ್ಲಿ ಇರುಕಿಕೊಂಡು, ಮೂಗಿನ ಮೇಲೆ ಕನ್ನಡಕವನ್ನೇರಿಸಿಕೊಂಡು ಬರುವ ಜನರನ್ನು ನೋಡಿದಕೂಡಲೆ ಅವರನ್ನು ಗುಮಾಸ್ತರೆಂದು ಗುರುತಿಸದವರಾರು? ಬಿಸಿಲಿನ ಝಳದಿಂದ ಕಣ್ಣುಗಳನ್ನು ರಕ್ಷಿಸುವ 'Cooling glass'ಗಳ ಹಿರಿಮೆಯೂ 'ಕನ್ನಡಕಮಾತೆ'ಗೆ ತಲಪಬೇಕಾದ್ದೆ!

ಆದರೆ ಕಣ್ಣಿಲ್ಲದವರು? ಕಣ್ಣೇನೋ ಎಲ್ಲರಿಗಿರುವ ಹಾಗೆಯೇ ಇರುತ್ತದೆ. ಆದರೆ ಅವುಗಳ ಜ್ಯೋತಿ ನಂದಿರುತ್ತದೆ. ಕೆಲವರು ಜನ್ಮತಃ ಅಂಧರಾಗಿರುತ್ತಾರಲ್ಲಾ—ಅವರ ಮನಸ್ಸಿನ ಆಶೆಗಳು ಅವರನ್ನು ಮತ್ತಷ್ಟು ಅಧೀರರನ್ನಾಗಿ ಮಾಡುತ್ತವೆ. ಮನೆಯವರ ಅಜಾಗರೂಕತೆಯಿಂದ ಒಬ್ಬ ಹುಡುಗನ ಕಣ್ಣಿನ ಕರಿಯಭಾಗ ಯಾರೋ ಹೇಳಿದ ಯಾವುದೋ ಔಷಧಿಯ ಮಹಿಮೆಯಿಂದ ಸುಟ್ಟು, ಕಣ್ಣು ಬರಿಯ ಬಿಳಿಯ ತೆರೆಯಂತೆ ಕಾಣುತ್ತದೆ. ಅಂತಹ ಅಂಧ ಬಾಲಕರ ಸ್ಥಿತಿಯು ಎಂತಹ ಕಲ್ಲೆದೆಯನ್ನಾದರೂ ಕರಗಿಸಿಬಿಡುತ್ತದೆ. ಮತ್ತೆ ಕೆಲವರಿಗೆ ಕಣ್ಣಿನಲ್ಲಿ 'ಹೂ ಬೆಳೆದು' ಕುರುಡರಾಗಿರುತ್ತಾರೆ. Short sight, long sightಗಳಿಂದ ನರಳುವವರು? ಇವೆಲ್ಲವನ್ನು ನಮ್ಮ ಕಣ್ಣುಗಳಿಂದಲೇ ನೋಡಬೇಕಲ್ಲಾ?

ಕೆಲವು ವೇಳೆ ಕಮಲಜಾತ ಬ್ರಹ್ಮ ಬಹಳ ಪಕ್ಷಪಾತಿ ಎನಿಸುತ್ತದೆ.

ತಾನು ಮಾತ್ರ 'ಎಂಟು ಕಣ್ಣು'ಗಳನ್ನಿಟ್ಟುಕೊಂಡು, ಇನ್ನೆಲ್ಲಿ ಮಾನವರು ತನ್ನನ್ನು ನಿಂದಿಸುವರೋ ಎಂದು, ಸೃಷ್ಟಿಯ ಬೃಹತ್ಕಾರ್ಯಸಾಧನೆಗೆ ನಾಲ್ಕು ತಲೆ, ಎಂಟು ಕಣ್ಣು ಬೇಕೇ ಬೇಕು! ಎಂದು ಸಕಾರಣವಾಗಿ, ತಿಳಿಸಿ, ಚರ್ಚಿಸಿ, ಸಾಧಿಸಿಬಿಟ್ಟಿದ್ದಾನೆ. ಹಾಗೆಯೇ ಪರಮೇಶ್ವರನಿಗೆ ಮೂರು ಕಣ್ಣು! ಎರಡು ಕಣ್ಣುಗಳಿಂದ ಸೃಷ್ಟಿಯ ಅನ್ಯಾಯಪರಂಪರೆಗಳನ್ನು ನೋಡಿ ನೋಡಿ, ಬೇಸತ್ತು, ವಿಶ್ರಾಂತಿಗಾಗಿ ಮೂರನೆಯ ಕಣ್ಣನ್ನು ತೆರೆಯಬಹುದು. ಲಂಕಾಧಿಪತಿ ರಾವಣನಿಗಾದರೋ ದಶಶಿರಗಳು! ಇಪ್ಪತ್ತು ಕಣ್ಣುಗಳು! ಆದರೆ ನನಗೇನೋ ಇರುವ ಎರಡು ಕಣ್ಣೇ ಸಾಕೆನಿಸುತ್ತದೆ. ಏಕೆಂದರೆ, ಈ ಎರಡು ಕಣ್ಣುಗಳಿಂದ ನೋಡಿದ ಅನ್ಯಾಯ, ಮೋಸ, ವಂಚನೆಗಳನ್ನೂ ದೀನದಲಿತರ ಹೀನ ಸ್ಥಿತಿಯನ್ನೂ ಹೋಗಲಾಡಿಸುವ ಸಾಮರ್ಥ್ಯವಿಲ್ಲದಾಗ, ಇನ್ನು ಎಷ್ಟು ಕಣ್ಣಿದ್ದರೇನು ಪ್ರಯೋಜನ?

ಬಿ. ನಾರಾಯಣಮ್ಮ

## ಕಣ್ಣು

ಕಣ್ಣಿನಿಂದಲೆ ಪುಣ್ಯ, ಕಣ್ಣಿನಿಂದಲೆ ಪಾಪ;
ಕಣ್ಣಿನಿಂದಿಹವು ಪರವಕ್ಕು—ಲೋಕಕ್ಕೆ
ಕಣ್ಣೆ ಕಾರಣವು ಸರ್ವಜ್ಞ.

ಕಣ್ಣು ಸಣ್ಣದು ತಾನು ಹಣ್ಣಾದಿಹುದೊಂದಿಲ್ಲ;
ತಣ್ಣಗಿಹ ಮನವನುರಿಸುವುದು—ಇದನು ಕೊಂ-
ದಣ್ಣಗಳು ಆರು ಸರ್ವಜ್ಞ?

ಕಣ್ಣು ನಾಲಗೆ ಮನವು ತನ್ನದೆಂದೆನಬೇಡ
ಅನ್ಯರೇ ಕೊಂದರೆನಬೇಡ—ಇವು ಮೂರು
ತನ್ನ ಕೊಲ್ಲುವುವು ಸರ್ವಜ್ಞ.

# ಸಸ್ಯ ಪ್ರಪಂಚ

ಜಗತ್ತಿನಲ್ಲಿ ಜೀವರಾಶಿಗಳು ಎಂದು ರೂಪ ತಾಳಿದವೋ ತಿಳಿಯದು. ಈಗಿರುವ ಜೀವರಾಶಿಗಳನ್ನು ದೈವ ಸೃಷ್ಟಿಸಿತು ಎಂಬ ನಂಬಿಕೆ ಪೂರ್ವಿಕರಲ್ಲಿ ಇತ್ತು. ಆದರೆ ಜೀವವಿಜ್ಞಾನಿಗಳು ಅನೇಕ ಸಂಶೋಧನೆಗಳನ್ನು ನಡಸಿ, ಈಗಿರುವ ಜೀವರಾಶಿಗಳು ರೂಪಾಂತರ ಹೊಂದಿ ಈ ಸ್ಥಿತಿಗೆ ಬಂದಿವೆ, ಅನೇಕ ಲಕ್ಷ ವರ್ಷಗಳಿಂದಲೂ ಜಲಚರಾದಿಗಳು ಪ್ರಗತಿ ಹೊಂದಿವೆ, ಎಂದು ವಿಸ್ತಾರ ವಾಗಿ ಪ್ರತಿಪಾದಿಸಿದ್ದಾರೆ. ಜೀವ ವಿಜ್ಞಾನಕ್ಕೆ ಪಿತೃಪ್ರಾಯನಾದ ಚಾರ್ಲ್ಸ್ ಡಾರ್ವಿನ್ 1859 ರಲ್ಲಿ "Origin of Life" ಎಂಬ ಸಿದ್ಧಾಂತವನ್ನು ಹೊರಗೆಡಹಿದ. ನಾವು ಕಾಣುವ ಜಲಚರಾದಿಗಳು ಆದಿಯಲ್ಲಿ ಸೂಕ್ಷ್ಮ ಜೀವರಾಶಿಯಿಂದ ರೂಪಾಂತರ ಹೊಂದಿದವು ಎಂದು ಆತ ಪ್ರಮಾಣಪಡಿಸಿ ದ್ದಾನೆ. ಆರಂಭದ ಕಾಲದಲ್ಲಿ ಜೀವಿಗಳು ಹೇಗೆ ರೂಪಾಂತರ ಹೊಂದಿದವೋ ತಿಳಿಯಲು ಸುಲಭಸಾಧ್ಯವಲ್ಲ. ಹೇಗೆ ಪ್ರಗತಿ ಹೊಂದಿದುವೆಂದು ಸೂಕ್ಷ್ಮವಾಗಿ ನೋಡೋಣ.

ಆದಿಯಲ್ಲಿ ಯಾವ ಜೀವಿಗಳೂ ಇರಲಿಲ್ಲ. ಜೀವವಿಜ್ಞಾನಿಗಳು "ಪಂಚ ಭೂತಗಳಿಂದ ಒಂದು ಚೇತನವಸ್ತು ಉತ್ಪತ್ತಿಯಾಯಿತು, ಅದನ್ನು 'ಜೀವ ಧಾತು' (Protoplasm) ಎನ್ನಬಹುದು, ಇದರಿಂದ ಜೀವರಾಶಿಯ ಉತ್ಪತ್ತಿಗೆ ಪ್ರಾರಂಭವಾಯಿತು" ಎಂದು ತಿಳಿಸಿದ್ದಾರೆ. ಮೊದಲುಮೊದಲು ಸಸ್ಯಗಳಿಗೂ ಪ್ರಾಣಿಗಳಿಗೂ ಹೆಚ್ಚಿನ ವ್ಯತ್ಯಾಸವಿರಲಿಲ್ಲ. ಇವು ಒಂದೇ ಗುಂಪಿನಿಂದ ಉದಯಿಸಿ, ಅನಂತರ ಪ್ರಾಣಿಗಳು ಸಸ್ಯಗಳು ಎಂದು ಕವಲುಗಳಾದವು.

ಸಸ್ಯ ಪ್ರಪಂಚವನ್ನು ಮತ್ತೆ ಸ್ಥೂಲವಾಗಿ ಹೀಗೆ ವಿಭಾಗಿಸಿದ್ದಾರೆ: (a) **ಹೂ ಬಿಡದ ಸಸ್ಯಗಳು;** (b) **ಹೂ ಬಿಡುವ ಸಸ್ಯಗಳು.**

ಹೂ ಬಿಡದ ಸಸ್ಯಗಳ ಗುಂಪಿನಲ್ಲಿ ಶೈವಲಗಳು (Algae) ಅತಿ ಪ್ರಾಚೀನವಾದುವು. ಇವುಗಳ ಸಂಖ್ಯೆ 14000, ಎಂದು ಶಾಸ್ತ್ರಜ್ಞರು ಲೆಕ್ಕ ಹಾಕಿದ್ದಾರೆ. ಪ್ರಥಮದಲ್ಲಿ ಸಸ್ಯಗಳು ಸಮುದ್ರದಲ್ಲಿ ಉದಯವಾದವು. ಕೆಲವು ಸಿಹಿನೀರಿನ ಕೊಳಗಳಲ್ಲಿಯೂ ಸಾಗರಗಳಲ್ಲಿಯೂ ಬೆಳೆಯುತ್ತವೆ. ಶೈವಲ

ಗಳೆಲ್ಲ ಸ್ವತಂತ್ರ ಜೀವಿಗಳು. ಪತ್ರಹರಿತ್ತೆಂಬ ರಾಸಾಯನಿಕ ವಸ್ತುವಿನಿಂದಲೂ ಸೂರ್ಯನ ಕಿರಣಗಳಿಂದಲೂ ತಮ್ಮ ಆಹಾರವನ್ನು ಉತ್ಪತ್ತಿ ಮಾಡಿಕೊಂಡು ಸ್ವತಂತ್ರವಾಗಿವೆ. ಈ ಗುಂಪಿನಲ್ಲಿ ಅನೇಕ ಸಸ್ಯಗಳು ಅತಿ ಸೂಕ್ಷ್ಮವಾದವು. ಬರಿಯ ಕಣ್ಣು ನೋಡಲು ಸಾಧ್ಯವಿಲ್ಲ; ಸೂಕ್ಷ್ಮದರ್ಶಕ ಯಂತ್ರದ ಸಹಾಯ ದಿಂದ ಇವುಗಳ ಜೀವನಕ್ರಿಯೆಯನ್ನು ತಿಳಿಯಬಹುದು. ಒಂದು ಸಹಸ್ರ ಶೈವಲಗಳನ್ನು ಕೂಡಿಸಿದರೆ ಒಂದು ಸಾಸಿವೆ ಕಾಳಿನಷ್ಟೂ ಆಗುವುದಿಲ್ಲ; ಅಷ್ಟು ಸೂಕ್ಷ್ಮ ಜೀವಿಗಳು. ಉದಾ: ಕ್ಲಾಮಿಡೊಮಾನಾಸ್, ಯುಗ್ಲೀನ, ವಾಲ್ವಾಕ್ಸ್ ಎಂಬವು. 'ಕ್ಲಾಮಿಡೊಮಾನಾಸ್'— ಇದು ಏಕಕಣ ಸಸ್ಯ. ಎಲ್ಲ ಜೀವನಕ್ರಿಯೆಯನ್ನು ನಿರ್ವಹಿಸುತ್ತದೆ. ಚಾವಟಿಯಂತಿರುವ ೨ ಬಾಲ ಗಳಿಂದ ಇದು ಚಲಿಸಬಲ್ಲದು, ಮತ್ತು ಹರಿತ್ತಿನಿಂದ ಆಹಾರವನ್ನು ತಯಾರಿಸಿ ಕೊಳ್ಳುವುದು. 'ನ್ಯೂಕ್ಲಿಯಸ್' ಎಂಬುದು ಇದರ ವಂಶೋತ್ಪತ್ತಿ ಕಾರ್ಯದಲ್ಲಿ ಹೆಚ್ಚಿನ ಪಾತ್ರ ವಹಿಸುತ್ತದೆ. ಕೆಲವು ಶೈವಲಗಳು ಸಾಗರದಲ್ಲಿ ಬೆಳೆಯುವುವು. ಕೆಲವು ದಾರದಂತಿರುವುವು. ನಾವು ಕೆರೆ ಕುಂಟೆಗಳಲ್ಲಿ ಕಾಣುವ 'ಪಾಚಿ' ಎಲ್ಲ ಈ ಗುಂಪಿಗೆ ಸೇರಿದವು.

ಶೈವಲಗಳಂತೆಯೇ ಶಿಲೀಂಧ್ರಗಳೆಂಬ (Fungi) ಸಸ್ಯಗಳೂ ಇವೆ. ಶಿಲೀಂಧ್ರಗಳು ಸಸ್ಯಗಳಿಗೆ ಅವಶ್ಯಕವಾಗಿರುವ ಪತ್ರಹರಿತ್ತನ್ನು ಹೊಂದದೆ ಇರುವವು. ಇವುಗಳೆಲ್ಲ ಪರತಂತ್ರ ಜೀವಿಗಳು. ಉದಾ: ರೊಟ್ಟಿಯ ಮೇಲೆ ಬೆಳೆಯುವ ಬೂಷ್ಟು ಈ ವರ್ಗಕ್ಕೆ ಸೇರಿದ ಸಸ್ಯ. ಕೆಲವು ಮನುಷ್ಯನಿಗೆ ಉಪ ಕಾರವನ್ನು, ಮತ್ತೆ ಕೆಲವು ನಷ್ಟವನ್ನು ಉಂಟುಮಾಡುವುವು. ಉಪಯುಕ್ತ ಶಿಲೀಂಧ್ರಗಳನ್ನು ನೋಡಿದರೆ: ಮೊಸರಿನಲ್ಲಿರುವ yeast, ಮತ್ತು 'ಲ್ಯಾಕ್ಟಿಕ್ ಆಸಿಡ್ ಬ್ಯಾಕ್ಟೀರಿಯ.' ಆಧುನಿಕ ಸಂಜೀವಿನಿ ಎಂದು ಹೆಸರುಪಡೆದಿರುವ "ಪೆನಿಸಿಲಿಯಂ" ಒಂದು ಶಿಲೀಂಧ್ರ. ಇದರಿಂದ ಅನೇಕ ಉಪಯುಕ್ತ ಔಷಧಗಳನ್ನು ತಯಾರಿಸುತ್ತಾರೆ. ಮತ್ತೆ ಕೆಲವು ಶಿಲೀಂಧ್ರಗಳು ಮನುಷ್ಯ ನಿಗೂ ಸಸ್ಯಗಳಿಗೂ ಉಪದ್ರವವನ್ನು ತರುವಂಥವುಗಳಾಗಿವೆ. ಸಸ್ಯಗಳಿಗೆ ಬರುವ ರೋಗಗಳಲ್ಲಿ ಅಡಕೆ ಗಿಡಕ್ಕೆ ಬರುವ ಕೊಳೆರೋಗ, ಜೋಳಕ್ಕೆ ಬರುವ ಕಾಡಿಗೆರೋಗ, ಕಾಫಿ ಗಿಡಕ್ಕೆ ಬರುವ ತುಕ್ಕುರೋಗ, ಮುಂತಾದವುಗಳ ಸಂಖ್ಯೆ 70 ಸಾವಿರವೆಂದು ತಜ್ಞರು ಲೆಕ್ಕಹಾಕಿದ್ದಾರೆ.

'ಕಲ್ಲು ಹೂ' ಎಂಬುದೂ ಒಂದು ಸಸ್ಯ. ಇವುಗಳಲ್ಲಿ ಶೈವಲಗಳೂ ಶಿಲೀಂಧ್ರಗಳೂ ಸೇರಿ ಒಂದು ಸಸ್ಯವಾಗಿದೆ. ಇವು ಬೆಟ್ಟ ಗುಡ್ಡಗಳಲ್ಲಿಯೂ ಹಳೆಯ ಮಾವಿನ ಮರಗಳ ಮೇಲೆಯೂ ಬೆಳೆಯುತ್ತವೆ. ಇವುಗಳನ್ನು ಔಷಧಕ್ಕೆ, ಸಂಬಾರ ಪದಾರ್ಥಕ್ಕೆ ಉಪಯೋಗಿಸುವರು.

ಸಸ್ಯಗಳು ಸಮುದ್ರದಿಂದ ಉದಯಿಸಿ ಭೂಮಿಯ ಮೇಲೆ ತರುವಾಯ ಆವರಿಸಿಕೊಂಡವು. ಆದಿಯಲ್ಲಿ (Amphibious) ಜಲಚರ ಸ್ಥಲಚರ ಸಸ್ಯಗಳು ಕಾಣಿಸಿಕೊಂಡವು. ಈ ಸಸ್ಯಗಳು ಬಾಹ್ಯರಚನೆಯಲ್ಲಿ ಮನುಷ್ಯನ ಪಿತ್ತಾಶಯ ವನ್ನು ಹೋಲುತ್ತವೆ. ಆದ್ದರಿಂದ ಇದನ್ನು ಶಾಸ್ತ್ರಜ್ಞರು Liverworts ಎಂದು ಕರೆಯುತ್ತಾರೆ. ಇವು ಸ್ವತಂತ್ರ ಜೀವಿಗಳು. ಪ್ರಗತಿಯನ್ನು ಶೋಧಿಸುತ್ತ ನಡೆದರೆ ಈ ಗುಂಪಿನಲ್ಲಿ ಪಾಚಿಯಂತಿರುವ ಸಸ್ಯಗಳನ್ನು ಜೌಗುಪ್ರದೇಶ ದಲ್ಲಿಯೂ ಹಳೆಯ ಗೋಡೆಗಳ ಮೇಲೂ ಕಾಣಬಹುದು. ಇವುಗಳ ಅಂಗ ರಚನೆಯಲ್ಲಿ ಬೇರು, ಕಾಂಡ, ಎಲೆ ಕಾಣಬಂದರೂ ಒಳರಚನೆಯಲ್ಲಿ ಇವು ಅಷ್ಟಾಗಿ ಪ್ರಗತಿ ಹೊಂದಿಲ್ಲ.

ಸಸ್ಯ ಜಗತ್ತನ್ನು ಶೋಧಿಸುತ್ತಾ ಹೋದರೆ Pteridophytes ಎಂಬ ಗುಂಪಿನ ಸಸ್ಯಗಳನ್ನು ಕಾಣುತ್ತೇವೆ. ಇವುಗಳಲ್ಲಿ ಹೂ ಕಾಯಿಗಳಿರುವುದಿಲ್ಲ. ವಂಶಾಭಿವೃದ್ಧಿಗಾಗಿ ಎಲೆಯ ಹಿಂದೆ ಮೂಲಾಣುಗಳನ್ನು ಹೊಂದಿರುವ Sori ಎಂಬ ಕೋಶವಿರುವುದು. ಉದಾ: ಜರೀಗಿಡಗಳು (Ferns). ಜರೀಗಿಡಗಳು ನೋಡುವುದಕ್ಕೆ ಅಂದವಾಗಿರುವುವು. ಕೆಲವು ಜರೀ ಗಿಡಗಳು 10-15 ಅಡಿ ಎತ್ತರದ ವರೆಗೆ ಬೆಳೆಯುತ್ತವೆ. ಇವಕ್ಕೆ "Tree Ferns" ಎಂದು ಹೆಸರು.

ಜರೀಗಿಡಗಳನ್ನು ಬಿಟ್ಟು ಮುಂದೆ ಹೋದರೆ ಕುದುರೆ ಬಾಲದಂತಿರುವ ಸಸ್ಯಗಳಿವೆ, ಗದೆಯಂತಿರುವ ಸಸ್ಯಗಳಿವೆ. ಇವುಗಳೆಲ್ಲಾ ಸ್ವತಂತ್ರ ಜೀವಿಗಳು. ಸೂಕ್ಷ್ಮಾಣುಗಳನ್ನು ಹೊಂದಿರುವ ಇವುಗಳ ಎಲೆಯಿಂದ ವಂಶಾಭಿವೃದ್ಧಿ ನಡೆಯುತ್ತದೆ.

ಕೆಲವು ಬೆತ್ತಲೆ ಬೀಜದ ಸಸ್ಯಗಳುಂಟು. ಉದಾ: ದೊಡ್ಡ ಈಚಲು; ಇದು ಹೂ ಬಿಡುವುದಿಲ್ಲ. Mega Sporophyll (ಅಂಡಾಶಯವನ್ನು ಹೊಂದಿ ರುವ ಎಲೆ), Micro Sporophyll (ಪರಾಗ ಅಣುವನ್ನು ಹೊಂದಿರುವ ಎಲೆ)—ಇವುಗಳಿಂದ ಬೀಜೋತ್ಪತ್ತಿಯಾಗುತ್ತದೆ.

ಹೂ ಬಿಡುವ ಸಸ್ಯಗಳು:—ಈ ಗುಂಪಿನ ಬೀಜಗಳು ರಕ್ಷಣೆಯ ಕವಚವನ್ನು ಹೊಂದಿವೆ. ಈ ಸಸ್ಯಗಳು ಹೂ ಬಿಡುವ ಸಸ್ಯಗಳಲ್ಲಿ ಉನ್ನತ ಗುಂಪಿಗೆ ಸೇರಿದವುಗಳು. ಬೇರು, ಕಾಂಡ, ಎಲೆ, ಹೂ ಕಾಯಿಗಳನ್ನು ಚೆನ್ನಾಗಿ ಕಾಣಬಹುದು. ಈ ಗುಂಪನ್ನು ಎರಡು ವಿಭಾಗವಾಗಿ ಮಾಡಬಹುದು: (1) ಏಕದಳ ಸಸ್ಯಗಳು (Monocots). ಉದಾ: ತೆಂಗು, ಭತ್ತ, ರಾಗಿ. (2) ದ್ವಿದಳ ಸಸ್ಯಗಳು (Dicots). ಉದಾ: ಬಟಾಣಿ, ಅವರೆ, ತೊಗರಿ. ಈ ಗುಂಪಿನಲ್ಲಿ 1,33,000 ಸಸ್ಯಗಳಿವೆ ಎಂದು ತಜ್ಞರು ಅಭಿಪ್ರಾಯಪಟ್ಟಿದ್ದಾರೆ.

ಹೀಗೆ, ನೀರಿನಲ್ಲಿ ಹುಟ್ಟಿದ ಸಸ್ಯಗಳು ಪ್ರಾಣಿಗಳಂತೆಯೇ ಭೂಮಿಗೆ ಬಂದು ನೆಲಸಿ, ಬೇರು ಕಾಂಡ ಮುಂತಾದ ಭಾಗಗಳನ್ನು ಉತ್ಪತ್ತಿ ಮಾಡಿಕೊಂಡು ತಮ್ಮ ಜೀವನದ ಕಥೆಯನ್ನು ಮುಂದುವರಿಸಿಕೊಂಡವು. ಇದೇ ಸಸ್ಯಪ್ರಪಂಚದಲ್ಲಿ ಆಗಿರುವ ಪ್ರಗತಿ.

ಇಲ್ಲಿಯವರೆಗೆ ಸಸ್ಯಗಳು ಹೇಗೆ ಪ್ರಗತಿ ಹೊಂದಿದುವೆಂದು ಸೂಕ್ಷ್ಮವಾಗಿ ನೋಡಿದೆವು. ಇಂತಹ ಪ್ರಗತಿಪರ ಸಸ್ಯಗಳಲ್ಲಿಯೂ ಸಹ ನಾವು ಕೆಲವು ವೈಚಿತ್ರ್ಯವನ್ನು ಕಾಣುತ್ತೇವೆ. ಕೆಲವು ಆಹಾರವನ್ನು ತಮ್ಮ ಮುಂದಿನ ಪೀಳಿಗೆಗಾಗಿ ಕಾದಿಟ್ಟಿರುತ್ತವೆ. ಸಸ್ಯಗಳಲ್ಲಿಯೂ "ಆಹಾರದ ಬ್ಯಾಂಕ್"ಗಳನ್ನು ನೋಡಬಹುದು. ಉದಾ: ಗೆಣಸು, ಗೆಡ್ಡೆಕೋಸು, ಮೂಲಂಗಿ. ಅನೇಕ ಕಾಯಿಗಳು, ಧಾನ್ಯಗಳು ಕಷ್ಟಕಾಲದಲ್ಲಿ ಉಪಯೋಗಿಸಲು ಬೇಕಾದ ಆಹಾರವನ್ನು ಶೇಖರಿಸಿಕೊಂಡಿರುತ್ತವೆ.

ಜೀವನದಲ್ಲಿರುವಂತೆ ನಾವು ಸಸ್ಯಗಳಲ್ಲಿಯೂ ಪರಾವಲಂಬಿ ಸಸ್ಯಗಳನ್ನು ಕಾಣಬಹುದು. ನಿತ್ಯಕರ್ಮವೆಸಗಿ ಆಹಾರವನ್ನು ಕಷ್ಟಪಟ್ಟು ಸಂಪಾದಿಸುವ ಸಸ್ಯದ ಮೇಲೆ ನಿರಾಯಾಸವಾಗಿ ಆಹಾರವನ್ನು ಹೀರುವ ಜಿಗಣೆಯಂತಿರುವ ಸಸ್ಯಗಳನ್ನು ಕಾಣಬಹುದು. ವಿಸ್ಕಮ್ ಎಂಬ ಸಸ್ಯ ತನ್ನ ಆಹಾರನಾಳ ಮತ್ತು ನೀರಿನ ನಾಳವನ್ನು ಆಶ್ರಿತ ಸಸ್ಯದ ನಾಳದೊಂದಿಗೆ ಸೇರಿಸಿಕೊಂಡು ನೀರು ಆಹಾರಗಳನ್ನು ಪಡೆದು ಜೀವಿಸುತ್ತದೆ.

ನಾವು ಮಾಂಸಾಹಾರಿ ಪ್ರಾಣಿಗಳನ್ನು ನೋಡಿದ್ದೇವೆ. ಆದರೆ ಸಸ್ಯಗಳಲ್ಲಿಯೂ ಮಾಂಸವನ್ನು ತಿನ್ನುವ ಸಸ್ಯಗಳಿವೆ ಎಂದರೆ ಅಚ್ಚರಿಯಾಗಬಹುದು. ಡ್ರಾಸರ ಎಂಬ ಸಸ್ಯ ಕ್ರಿಮಿಕೀಟಗಳನ್ನು ಹಿಡಿದು ಜೀರ್ಣಿಸಿಕೊಳ್ಳುತ್ತದೆ.

Venus Fly Trap ಎಂಬುದು ಸಹ ನೊಣ, ಚಿಟ್ಟೆ, ಇರುವೆ ಬಂದರೆ, ತತ್ಕ್ಷಣ ಅವುಗಳನ್ನು ಹಿಡಿದುಕೊಂಡು ಅರಗಿಸಿಕೊಳ್ಳುತ್ತದೆ.

ಸಸ್ಯಜಗತ್ತಿನಲ್ಲಿ ಒಂದು ವಿಚಿತ್ರವೆಂದರೆ ಅವು "ಮದುವೆ"ಯಾಗುವುದು. ಸಸ್ಯಗಳಲ್ಲಿಯೂ ಮದುವೆಯಾಗುತ್ತೆ ಎಂದರೆ ನಮಗೆ ಆಶ್ಚರ್ಯ. ಅವು ಚಿಟ್ಟೆಯೆಂಬ ಪುರೋಹಿತನನ್ನು ಆಕರ್ಷಿಸಿದಾಗ, ಆ ಪುರೋಹಿತನ ಮೂಲಕ ಗಂಡು ಹೂವಿನ ಪರಾಗ ಹೆಣ್ಣು ಹೂವಿನ ನಾಳದ ಮೇಲೆ ಪ್ರೋಕ್ಷಣೆಯಾಗಿ ಮುಂದಿನ ಸಂತಾನಕ್ಕೆ ದಾರಿಯಾಗುತ್ತದೆ. ಪುರೋಹಿತನಿಗೆ ಮಧುವೆಂಬ ದ್ರಾಕ್ಷಾಪಾಕದ ದಕ್ಷಿಣೆ ದೊರಕುತ್ತದೆ. ಹೆಣ್ಣು ಹೂ ಆಕರ್ಷಣೀಯವಾಗಿ ವಿವಿಧ ಬಣ್ಣಗಳಿಂದ ಅಲಂಕೃತವಾಗಿ ಚಿಟ್ಟೆಯನ್ನು ಆಕರ್ಷಿಸುವುದನ್ನು ಸಸ್ಯಗಳಲ್ಲಿಯೂ ಕಾಣಬಹುದು. ಎಲ್ಲವೂ ದೈವದ ವಿಚಿತ್ರ. ಸಸ್ಯ ಜಗತ್ತಿನಲ್ಲಿ 248420 ಸಸ್ಯಗಳಿವೆ ಎಂದು ಶಾಸ್ತ್ರಜ್ಞರು ಲೆಕ್ಕಹಾಕಿದ್ದಾರೆ.

**ವೈ. ಕೆ. ಗುರುಮೂರ್ತಿ**

## ಅನ್ನ

ಅನ್ನದೇವರ ಮುಂದೆ ಇನ್ನು ದೇವರು ಉಂಟೆ?
ಅನ್ನವಿರುವನಕ ಪ್ರಾಣವು, ಜಗದೊಳ-
ಗನ್ನವೇ ದೈವ! ಸರ್ವಜ್ಞ.

ನಿದ್ದೆಗಳು ಬಾರವು, ಬುದ್ಧಿಗಳು ತಿಳಿಯವು,
ಮುದ್ದಿನ ಮಾತು ಸೊಗಸದು—ಬೋನದ
ಮುದ್ದೆ ತಪ್ಪಿದರೆ! ಸರ್ವಜ್ಞ.

ಕೊಟ್ಟಣವ ಕುಟ್ಟೆಪುದು, ಮಟ್ಟೆಯಸು ಹೊರಿಸುವುದು,
ಬಿಟ್ಟಿ ಕೂಲಿಗಳ ಮಾಡಿಸುವುದು—ಗೇಣು
ಹೊಟ್ಟೆ ಕಾಣಯ್ಯ ಸರ್ವಜ್ಞ.

# ಸಸ್ಯ ವಿವಾಹ

ಸಸ್ಯಗಳಲ್ಲಿಯೂ ವಿವಾಹ ಉಂಟೊ? ಓ, ಲಕ್ಷಣವಾಗಿ ಉಂಟು. ಪ್ರಾಣಿಗಳಲ್ಲಿರುವಂತೆಯೇ ಸಸ್ಯಗಳಲ್ಲಿಯೂ "ಲಿಂಗಭೇದ" ಉಂಟು. ಎರಡು ವಿಧದ ಜೀವಾಣುಗಳ ಸಂಯೋಗದಿಂದ ಒಂದು ಹೊಸ ಜೀವೋತ್ಪತ್ತಿಯಾಗುತ್ತದೆ. ಹೂ ಬಿಡುವ ಗಿಡಗಳಲ್ಲಿ ಈ ಜೀವಾಣುಗಳು ಎರಡು ವಿಧವಾಗಿರುತ್ತವೆ. ಒಂದು, ಪರಾಗ (ಗಂಡಿನ ಭಾಗ); ಮತ್ತೊಂದು, ಅಂಡಾಶಯ (ಹೆಣ್ಣಿನದು.) ಅಂಡಾಶಯದಿಂದ ಹೊರಟ ಉದ್ದವಾದ ಭಾಗಕ್ಕೆ ಶಲಾಕವೆಂತಲೂ, ಅದರ ತುದಿಗೆ ಶಲಾಕಾಗ್ರವೆಂತಲೂ ಹೆಸರು. ಪುಷ್ಪದ ಪರಾಗವನ್ನು ಶಲಾಕಾಗ್ರಕ್ಕೆ ಒಯ್ಯುವುದನ್ನು "ಪರಾಗಸ್ಪರ್ಶ" ಎನ್ನುವರು. ಕೆಲವರು ಇದನ್ನೇ "ಸಸ್ಯ ವಿವಾಹ"—ಎಂದೂ ಕರೆಯುವರು. ಇದೇ ಸಸ್ಯಗಳ ವಂಶೋದ್ಧಾರಕ್ಕೆ ಅಡಿಗಲ್ಲು. ಪರಾಗವು ಶಲಾಕಾಗ್ರದ ಮೇಲೆ ಬಿದ್ದಾಗ, ಅದು ಒಂದು ನಳಿಕೆಯನ್ನು ಉತ್ಪತ್ತಿ ಮಾಡುತ್ತದೆ. ಈ ನಳಿಕೆಯನ್ನು ಪರಾಗನಾಳ ಎಂದು ಕರೆಯುತ್ತಾರೆ. ಇದರ ಮೂಲಕ ಗಂಡಿನ ಭಾಗ ಹೆಣ್ಣಿನ ಭಾಗವನ್ನು ಸಮೀಪಿಸಿ ಅದರೊಡನೆ ಬೆರೆತು, ಹೊಸ ಜೀವೋತ್ಪತ್ತಿಯಾಗುತ್ತದೆ.

ಸಸ್ಯಗಳು ಯಾವಾಗಲೂ ಅಂಡಗಳಿಗಿಂತ, ಪರಾಗವನ್ನು ಹೆಚ್ಚಿನ ಪ್ರಮಾಣದಲ್ಲಿ ಉತ್ಪತ್ತಿ ಮಾಡುತ್ತವೆ. ಅಂಡವನ್ನು ಕಾಪಾಡುತ್ತಿರುವ ಅಂಡಕೋಶವು ಸ್ಥಿರವಾಗಿ ಇದ್ದೆಡೆಯಲ್ಲೇ ಇರುತ್ತದೆ. ಪರಾಗವು ಚರವಸ್ತುವಾದ್ದರಿಂದ, ಇದೇ ಅಂಡದ ಸಮೀಪಕ್ಕೆ ಹೋಗಬೇಕು. ಹಾಗೆ ಸ್ವತಃ ಹೋಗುವುದು ಪರಾಗಕ್ಕೆ ಸಾಧ್ಯವಿಲ್ಲವಾದುದರಿಂದ, ಪರಾಗ ಇತರ ಬಾಹ್ಯ ಕರ್ತೃತ್ವದ ಸಹಾಯವನ್ನಪೇಕ್ಷಿಸುತ್ತದೆ. ಈ ರೀತಿ ಪರಾಗವನ್ನು ಸ್ಥಳಾಂತರ ಮಾಡುವ ಕಾರ್ಯದಲ್ಲಿ ಆಗುವ ವಿಶೇಷ ನಷ್ಟವೇ ಅಧಿಕ ಪರಾಗೋತ್ಪತ್ತಿಗೆ ಕಾರಣ. ಪರಾಗಸ್ಪರ್ಶದಲ್ಲಿ ಮುಖ್ಯವಾಗಿ ಎರಡು ವಿಧ: **ಸ್ವಪರಾಗಸ್ಪರ್ಶ:** ಒಂದು ಹೂವಿನ ಪರಾಗವನ್ನು ಅದೇ ಹೂವಿನ ಶಲಾಕಾಗ್ರಕ್ಕೆ ಒಯ್ಯುವುದು; **ಪರಪರಾಗಸ್ಪರ್ಶ:** ಒಂದು ಹೂವಿನ ಪರಾಗವನ್ನು, ಅದೇ ಜಾತಿಗೆ ಸೇರಿದ ಬೇರೊಂದು ಹೂವಿನ ಶಲಾಕಾಗ್ರಕ್ಕೆ ಒಯ್ಯುವುದು. ಸ್ವಪರಾಗಸ್ಪರ್ಶದಲ್ಲಿ ಹೂವೇ ಪರಾಗವನ್ನು ಒಯ್ಯುವಿಕೆಯಲ್ಲಿ ಕರ್ತೃತ್ವವನ್ನು ವಹಿಸಿಕೊಳ್ಳುತ್ತದೆ.

ಪರಪರಾಗಸ್ಪರ್ಶವು ಬಾಹ್ಯದ ಕರ್ತೃತ್ವವಿಲ್ಲದೆ ಸಂಭವಿಸುವುದೇ ಇಲ್ಲ. ಸಾಮಾನ್ಯವಾಗಿ, ಈ ಬಾಹ್ಯಕರ್ತೃಗಳು ಮೂರು ವಿಧವಾಗಿರುತ್ತವೆ: ವಾಯು, ನೀರು ಅಥವಾ ಪ್ರಾಣಿಗಳು.

ವಾಯುವಿನಿಂದ ನಡೆಯುವ ಪರಾಗಸ್ಪರ್ಶವು ರಾಗಿ, ಜೋಳ ಇತ್ಯಾದಿಗಳ ಜಾತಿಗೆ ಸೇರಿದ ಗಿಡಗಳಲ್ಲಿ ಕಂಡುಬರುತ್ತದೆ. ಈ ಗಿಡಗಳಲ್ಲಿ ಶಲಾಕಾಗ್ರವು ಕುಂಚದಂತಿದ್ದು, ಗಾಳಿಯು ಹೊತ್ತು ತಂದ ಪರಾಗವನ್ನು ಸುಲಭವಾಗಿ ಹಿಡಿದುಕೊಳ್ಳಲು ಉಪಯೋಗವಾಗುತ್ತದೆ. ಪರಾಗವು ಬಲು ಸೂಕ್ಷ್ಮವಾಗಿಯೂ, ಬಲು ಹಗುರವಾಗಿಯೂ ಇರುವುದರಿಂದ ಗಾಳಿಯೊಡನೆ ಬಹು ದೂರ ಕೊಂಡೊಯ್ಯಲ್ಪಡುವುದು. ಈ ಹೂವುಗಳು ಸಾಧಾರಣವಾಗಿ ಮಾಸಲು ಬಿಳುಪು ಅಥವಾ ಬೂದಿ ಬಣ್ಣದ್ದಾಗಿರುತ್ತವೆಯಲ್ಲದೆ, ಮಧುವನ್ನು ಉತ್ಪತ್ತಿ ಮಾಡುವುದಿಲ್ಲ. ಆದ್ದರಿಂದಲೇ ಇವುಗಳ ಹತ್ತಿರ ಚಿಟ್ಟೆ, ದುಂಬಿ, ಇತ್ಯಾದಿ ಹುಳುಹುಪ್ಪಟೆಗಳು ಸುಳಿಯುವುದಿಲ್ಲ.

ನೀರಿನ ಸಹಾಯದಿಂದ ನಡೆಯುವ ಪರಾಗಸ್ಪರ್ಶವು ಸ್ವಲ್ಪ ವೈಶಿಷ್ಟ್ಯವನ್ನು ಪಡೆದಿದೆ. ಇದು ಜಲಸಸ್ಯಗಳಲ್ಲಿ ಕಂಡುಬರುತ್ತದೆ. ಉದಾಹರಣೆಗೆ "ವ್ಯಾಲಿಸ್‌ನೇರಿಯ" ಎಂಬ ಜಲಸಸ್ಯವನ್ನು ತೆಗೆದುಕೊಳ್ಳೋಣ. ಇಲ್ಲಿ ಪರಾಗವೂ ಅಂಡಗಳೂ ಬೇರೆ ಬೇರೆ ಗಿಡಗಳಲ್ಲಿ ಉತ್ಪನ್ನವಾಗುತ್ತವೆ. ಪರಾಗದ ಗಂಡು ಹೂವುಗಳು ಪರಾಗವನ್ನು ಉತ್ಪತ್ತಿ ಮಾಡಿಕೊಂಡು ನೀರಿನಲ್ಲಿ ತೇಲಿಬಿಡುತ್ತವೆ. ಹೀಗೆ ತೇಲುತ್ತಿರುವಾಗ ಅಲೆಗಳ ಹೊಡೆತಕ್ಕೆ ಸಿಕ್ಕಿ, ಆಕಸ್ಮಾತ್ತಾಗಿ, ಅಂಡವನ್ನು ಹೊಂದಿರುವ ಹೆಣ್ಣು ಹೂವನ್ನು ಸಮೀಪಿಸುತ್ತವೆ. ಇದರಿಂದ ಸಸ್ಯಸಂತಾನ ಮುಂದುವರಿಯುತ್ತದೆ.

ಪ್ರಾಣಿಗಳ ಸಹಾಯದಿಂದ ನಡೆಯುವ ಪರಾಗಸ್ಪರ್ಶ ವಿಕಸನದಲ್ಲಿ ಅತ್ಯುನ್ನತ ಸ್ಥಿತಿ. ಏಕೆಂದರೆ ಈ ಗಿಡಗಳಲ್ಲಿ ಹೂವುಗಳು ತಮ್ಮ ಅಸಮಾನವಾದ ವರ್ಣವೈವಿಧ್ಯತೆಯಿಂದಲೂ ಸುವಾಸನೆಯಿಂದಲೂ ಮಧುವನ್ನು ಉತ್ಪತ್ತಿ ಮಾಡುವ ಗುಣಗಳಿಂದಲೂ, ಚಿಟ್ಟೆ, ದುಂಬಿ, ಜೇನು ಇತ್ಯಾದಿಗಳನ್ನು, ಆಕರ್ಷಿಸುತ್ತವೆ. ಇದಕ್ಕೆ ಮನಸೋತು ತಮ್ಮ ಆಹಾರಾನ್ವೇಷಣೆಯ ಸಂಭ್ರಮದಲ್ಲಿ, ಈ ಬಡ ಪ್ರಾಣಿಗಳು ಉದ್ದೇಶವಾಗಿಯೋ, ನಿರುದ್ದೇಶವಾಗಿಯೋ, ಪರಾಗಸ್ಪರ್ಶವನ್ನುಂಟುಮಾಡುತ್ತವೆ. ಈ ಗಿಡಗಳು ಪರಾಗ ಸ್ಪರ್ಶವನ್ನು

ಆಗಮಾಡಿಸುವುದಕ್ಕೆ, ತಮ್ಮ ವಿವಿಧ ಅಂಗಗಳ, ಮುಖ್ಯವಾಗಿ ಹೂಗಳ ರಚನೆಯಲ್ಲಿ ಬದಲಾವಣೆಗಳನ್ನೂ ಹೊಂದಿಕೊಳ್ಳುವಿಕೆಯನ್ನೂ ಮಾರ್ಪಾಟು ಗಳನ್ನೂ ಪ್ರದರ್ಶಿಸುತ್ತವೆ.

ಪರಾಗಸ್ಪರ್ಶವು ಗರ್ಭಧಾರಣೆಯೆಂಬ ಕಾರ್ಯಕ್ರಮದಲ್ಲಿ ಕೊನೆಗಾಣು ತ್ತದೆ. ಈ ರೀತಿ ಫಲವತ್ತಾದ ಅಂಡವು ಬೆಳೆಯುವುದಕ್ಕೆ ಮೊದಲುಮಾಡು ತ್ತದೆ. ಕೊನೆಯಲ್ಲಿ ಅಂಡವು ಬೀಜವಾಗಿಯೂ, ಅದನ್ನು ಕಾಪಾಡುತ್ತಿದ್ದ ಅಂಡಕೋಶವು ಕಾಯಿ ಅಥವಾ ಹಣ್ಣಾಗಿ ಮಾರ್ಪಡುತ್ತದೆ. ತಿನ್ನಲು ಯೋಗ್ಯವಾದ ಹಣ್ಣುಗಳನ್ನು ತಿಂದು, ಬೀಜವನ್ನು ಎಸೆಯುತ್ತಾರೆ. ಹೀಗೆ ಬಿಸಾಡಿದ ಬೀಜಗಳು ಮೊಳೆತು, ಸಣ್ಣ ಗಿಡಗಳಾಗಿ, ಬೆಳೆದು, ದೊಡ್ಡವಾಗು ತ್ತವೆ. ತಮ್ಮ ಹಿರಿಯರಂತೆ ಹೂವು ಬಿಟ್ಟು, ಕಾಯಿ, ಹಣ್ಣು, ಬೀಜಗಳನ್ನು ಉತ್ಪತ್ತಿ ಮಾಡುತ್ತವೆ. ಅಂದರೆ, ತಮ್ಮ ವಂಶ ನಶಿಸಿಹೋಗದಂತೆ, ತಕ್ಕ ಕ್ರಮವನ್ನು ಕೈಗೊಳ್ಳುತ್ತವೆ. ಬೀಜದಿಂದಲೆ ಮುಖ್ಯವಾಗಿ ತಡೆಯಿಲ್ಲದ ವಂಶಾಭಿವೃದ್ಧಿಯಾಗುವುದರಿಂದ, ಬೀಜೋತ್ಪತ್ತಿಗೆ ಹೆಚ್ಚು ಪ್ರಾಮುಖ್ಯತೆ. ಅಂದರೆ ಈ ಬೀಜೋತ್ಪತ್ತಿಗೆ ಮೂಲಕಾರಣವಾದ "ಸಸ್ಯ ವಿವಾಹ"ಕ್ಕೆ ಹೆಚ್ಚು ಗಮನ ಕೊಡಬೇಕೆಂದು ಒತ್ತಿ ಹೇಳುವುದು ಅನಾವಶ್ಯಕ.

**ಸಿ. ಆರ್. ಪುಟ್ಟಣ್ಣಯ್ಯ**

## ಆರೋಗ್ಯ

ಉಂಡು ಕೆಂಡವ ಕಾಸಿ, ಉಂಡು ಶತಪದ ನಡೆದು,
ಉಂಡೆಡದ ಮಗ್ಗುಲಲಿ ಮಲಗಿದರೆ—ವೈದ್ಯನ
ಬಂಡಾಟವಿಲ್ಲ ಸರ್ವಜ್ಞ.

ಹಸಿಯದಿರೆ ಉಣಬೇಡ, ಹಸಿದು ಮತ್ತಿರಬೇಡ;
ಬಿಸಿ ಬೇಡ, ತಂಗೂಳುಣಬೇಡ—ವೈದ್ಯರಾ
ಬೆಸನವೇ ಬೇಡ ಸರ್ವಜ್ಞ.

# ಸಸ್ಯವೈಭವ

ಮನುಷ್ಯ ಹೆಚ್ಚು ಹೆಚ್ಚು ಸಂಶೋಧನೆ ನಡಸಿ ತಾನು "ದೊಡ್ಡ ವಿಜ್ಞಾನಿ" ಎಂದುಕೊಂಡಂತೆಲ್ಲಾ, ಅವನ ಅಸ್ತಿತ್ವ ಅತಿ ಅಲ್ಪವಾಗಿ ಪರಿಹಾಸ್ಯಾಸ್ಪದವಾಗಿ ಮಾರ್ಪಡುತ್ತದೆ. ಅವನ ಪೂರ್ವಜರಾದ ಕಪಿ ಮಂಡಲಿಯವರು ಅವನಿಗಿಂತ ಕೋಟಿಪಾಲು ಲೇಸು. ಏಕೆಂದರೆ, ಅವುಗಳೂ ಹಾವಳಿ ಮಾಡಿ ಹಣ್ಣುಗಳನ್ನು ಗಿಡದಿಂದ ಪರಚಿಕೊಂಡರೂ, ತಮ್ಮ ತೃಪ್ತಿಗಾಗುವಷ್ಟು ಮಾತ್ರ ತಿಂದು ಕೊನೆಯ ಪಕ್ಷ ತಮ್ಮ ತನುವನ್ನಾದರೂ ಬಲವಾಗಿ ಉಳಿಸಿಕೊಳ್ಳುತ್ತವೆ; ಮರಗಿಡಗಳನ್ನೇ ಪೂರ್ತಿಯಾಗಿ ನಂಬಿ, ತಮ್ಮ ಮನೆ, ರಸ್ತೆ ರಕ್ಷಣೆಯಾಗಿ ಇಡೀ ಬದುಕಿಗೆ ಆಧಾರವಾಗಿ ಉಳಿಸಿಕೊಂಡು, ಸಸ್ಯಗಳ ಸಂಗದಿಂದ ಇಳಿದು ಕೂಡ ಬರಲು ಇಚ್ಛಿಸುವುದಿಲ್ಲ. ಅಲ್ಲದೆ, ಕುಚೇಷ್ಟೆಗಾಗಿಯಾದರೂ ವೃಕ್ಷಲತಾದಿಗಳನ್ನು ಅಣಕಿಸುವುದಿಲ್ಲ. ಪ್ರಕೃತಿಗೆ ಅವಮಾನಪಡಿಸುವಂತೆ ಕೃತಕವಾಗಿ ನಿರ್ಮಿಸಿಕೊಂಡು, ಆಕೆಯ ಹೃದಯವನ್ನು ಸಂಕೋಚಪಡಿಸುವುದಿಲ್ಲ. ಅವಳ ಮುಂದೆ ನಿಂತು ದೃಷ್ಟಿ ತಾಕುವಂತೆ ನೋಡುವುದೂ ಇಲ್ಲ. ನಾಲಗೆಗೆ ನಿಲುಕದ ಅವಳ ಅಮರವಾದ ಸೊಬಗನ್ನು ವರ್ಣಿಸುವುದೆಂದರೇನು? ಯಾವ ಭಾಷೆಯಲ್ಲಿ ತಾನೆ ವರ್ಣನೆಯು ಪೂರ್ಣರೂಪಾಗಿ ಅಚ್ಚಳಿದಿದೆ? ಇದಕ್ಕಾಗಿ, ಭಕ್ತಿಯ ಕುರುಹಾದ ಮೂಕತ್ವದಲ್ಲಿ ಮುಳುಗುವುದೇ ಪವಿತ್ರ ಸಾಧನೆ ಎಂಬಂತೆ ಅವು ಮಾತನ್ನೇ ಆಡುವುದಿಲ್ಲ. ಆಡಿ ಆಕೆಯ ಮುಂದೆ ಕೀಳಾಗುವ ಸಂಭವ ಅವಕ್ಕಿಲ್ಲ. ಮಾನವನಾದರೋ ಕನ್ನಡ, ತೆಲುಗು, ತಮಿಳು, ಸಂಸ್ಕೃತ, ಹಿಂದಿ, ಉರ್ದು, ಪಾರ್ಸಿ, ಬಂಗಾಳಿ, ಮಲೆಯಾಳ, ತುಳು ಇತ್ಯಾದಿಯಿಂದ, ಇಂಗ್ಲಿಷ್, ಜರ್ಮನ್, ಫ್ರೆಂಚ್, ಗ್ರೀಕ್, ಲ್ಯಾಟಿನ್ ವಗೈರೆಗಳವರೆಗೂ "ಸಸ್ಯವೈಭವ"ದ ಮೂರ್ತಿಯನ್ನು ಚೂರಾಗಿ ಕತ್ತರಿಸಿ, ಅಡಗಿಸಲು ಪ್ರಯತ್ನಿಸುವುದು ಸಾಲದೆಂದು, ಹುಚ್ಚು ಹುಚ್ಚಾಗಿ ಹಾಡುತ್ತಾ, ಹೊಸದಾಗಿ ಭೂಮಿಯನ್ನು ತಾವು ಸೃಷ್ಟಿಮಾಡಲಿಲ್ಲ, ಹೊಸದಾಗಿ ನೀರು ತರಲಿಲ್ಲ, ಹೊಸದಾಗಿ ಬೆಳೆಯನ್ನು ಬೆಳೆಯಲಿಲ್ಲ! "ತಿಂದ ಮನೆಗೆರಡು ಬಗೆವ" ನಾಣ್ಣುಡಿಯನ್ನು ಅನುಸರಿಸಿ, ಮುಖ್ಯವಾದ ಎರಡು ಕಣ್ಣುಗಳು, ಒಂದು ಮೆದುಳು ಮತ್ತು ಹಿಗ್ಗುವ ತಗ್ಗುವ ಮನಸ್ಸನ್ನು ಕೊಟ್ಟ ಜನ್ಮದಾತನಿಗೆ

ಬೇಕಾದಷ್ಟು ಆರೋಪಿಸಿ (ಅಂದರೆ, ಅನೇಕ ವೇಳೆ ಅಸಹಾಯರಾದಾಗ, ದೇವರು ನಮಗೆ ಹೆಚ್ಚಾಗಿ ಮೆದುಳು ಕೊಟ್ಟಿಲ್ಲ, ಬುದ್ಧಿ ಕೊಟ್ಟಿಲ್ಲ, ಒಬ್ಬಿಬ್ಬರಿಗೆ ಮಾತ್ರ ಕೊಟ್ಟಿದ್ದಾನೆ. ಅವನು ಬಹಳ ಪಕ್ಷಪಾತ ತೋರಿಸಿದ್ದಾನೆ ಎಂದು) ತೃಪ್ತಿ ಹೊಂದುವ ಮನುಜರು ದಾನವಾಗಿ ಕೊಟ್ಟ ದುಪ್ಪಟಿಯನ್ನು ಎಷ್ಟು ಗಜವೆಂದು ಅಳೆಯುವುದೇನಾಶ್ಚರ್ಯ? ತೆರೆಯ ಮರೆಯಲ್ಲಿ ವಾಸಿಸುವ, ನಿಬಿಡ ವಾದ ಅರಣ್ಯದ ಪ್ರವೇಶಿಸಲಸಾಧ್ಯವಾದ ಪ್ರದೇಶದಲ್ಲಿ ಅಖಂಡ ಪಕ್ಷಿ ಪ್ರಾಣಿ ಕೀಟಗಳಿಗೆ ಆಶ್ರಯ ಕೊಡುತ್ತಾ ಅಡಗಿರುವ ತರು ಲತೆಗಳನ್ನು ಆರಿಸಿ ಕೊಂಡು ಹೋಗಿ ಬಯಲಿಗೆಳೆದು, ಪ್ರಕೃತಿಯ ಸಹಜತೆಗೆ ಭಂಗತರುವುದು ಮಾತ್ರವಲ್ಲದೆ ಆ ಐಸಿರಿಯ ಮುಖವನ್ನು ಪ್ರತಿತೂಗಿಸುವಂತೆಯೋ, ಇಲ್ಲವೆ ಅಣಕಿಸುವಂತೆಯೋ, ಕೃತಕವಾಗಿ ಚಿತ್ರಿಸಲು ಹೊರಡುತ್ತಾನೆ! ಅವುಗಳ ಬೇರು ಮೂಲಗಳನ್ನು ಹುಡುಕಿ, ಭೂಗುಣವನ್ನು ಅಳೆದು, ತನಗೆ ಬೇಕಾದ ಕಡೆಗಳಲ್ಲಿ ಬೆಳಸಿ, ರೂಪನಿರ್ಮಾಣ ಮಾಡತೊಡಗುತ್ತಾನೆ. ಪ್ರಕೃತಿಯ ಅಂತರಾತ್ಮಕ್ಕೆ ಸ್ಥಳವನ್ನೂ ಉಳಿಸದೆ, ಕಣ್ಣಿಟ್ಟು ಕತ್ತರಿಸಿ (ಹುಲ್ಲು, ಗಿಡ, ಮರ, ಬಳ್ಳಿ, ಗೆಡ್ಡೆ, ಹೂ, ಕಾಯಿಗಳನ್ನು) ಭವ್ಯ ಮಂದಿರಗಳಲ್ಲಿ ಬುದ್ಧಿವಂತ ನಾಗಿ, "ಸುರದೇವತೆ" ಅವಳನ್ನು ಸೆರೆಯಾಗಿಸುವ ಯತ್ನಮಾಡುವುದನ್ನು ನೋಡಿದರೆ ಶೋಚನೀಯವಾದ ನಗು ಬರುತ್ತದೆ!—ಓಹೋ! ಇಷ್ಟಕ್ಕಾಗಲೇ ವಾಚಕರಿಗೆ ಸಿಟ್ಟಿದ್ದಿರಬಹುದೊ! ಓ, ಸ್ವಲ್ಪ ಸಾವಧಾನವಾಗಿ! ಹಿಂದಿನ ಚಿತ್ರ ವನ್ನು ಮಗುಚಿದಿರಿ ತಾನೆ? ಬನ್ನಿ. ಮುಂದಿನ ದೃಶ್ಯವನ್ನು ಅವಲೋಕಿಸಿ.

"Whenever you feel tired or when you do not have peace of mind, go either to the hill-side or to the sea-shore. Nature plays a beautiful part . . . " ಎಂಬುದಾಗಿ ಪ್ರಪಂಚದ ಎಲ್ಲಾ ಥಿಯಸಾಫಿಕಲ್ ಸಂಸ್ಥೆಯ ಶಾಖೆಗಳಿಗೂ ಪ್ರೆಸಿಡೆಂಟರಾಗಿ, ವಿಶ್ವಕ್ಕೇ ಕೇಂದ್ರವಾದ ಅಡಿಯಾರಿನಲ್ಲಿ ಅಲೌಕಿಕವಾದ ತಮ್ಮ ಸೇವೆ ಸಲ್ಲಿಸಿದ (ಬೌದ್ಧ ರಾದ) ದಿವಂಗತ ಶ್ರೀ ಜಿನರಾಜದಾಸರವರು ಒಮ್ಮೆ ಸಾವಿರಾರು ವೃದ್ಧರೂ ಯುವಕರೂ ತುಂಬಿದ್ದ ಸಭೆಯಲ್ಲಿ ಹೇಳಿದರು.

ಕೇವಲ ಒಣಕಾಳಿನ ಅಂತರಾಳದಲ್ಲಿ "ಆತ್ಮ"ವನ್ನು ಗುಪ್ತೀಕರಿಸಿ ಕೊಂಡು, ತುಂತುರು ಹನಿನೀರು ಸೋಕಿದ ಕೂಡಲೆ, ತಾಳು-ಬೇರುಗಳನ್ನು

ಬೇರ್ಪಡಿಸಿಕೊಂಡು, ಬಾಹ್ಯ ಜಗತ್ತನ್ನು ಪರೀಕ್ಷಿಸುವಂತೆ, ಮಣ್ಣಿನ ಮುಸುಕಿನಲ್ಲಿ ರೂಪಾಂತರ ಹೊಂದುತ್ತಾ ಜನರ ಕುತೂಹಲವನ್ನು ಹೊರಗೆ ಮಾಡಹತ್ತುತ್ತದೆ. ತೃಣದಿಂದ ಹಿಡಿದು ಕಲ್ಪವೃಕ್ಷದ (ತೆಂಗಿನ ಮರದ)ವರೆಗೂ, ಸಸ್ಯರಾಶಿಯು "Sub-human Kingdom" ಅಥವಾ "ಉಪಮಾನವ ರಾಜ್ಯ"ದ ಸಂಪತ್ತಾಗಿ, ಅಸಂಖ್ಯ ಪಶು, ಪಿಕ, ಶುಕ, ಪ್ರಾಣಿ, ಜೀವ, ಜಂತುಗಳಿಗೆ ಜೀವಾಧಾರವಾಗಿ, ದೇವ-ಮಾನವ ಕೋಟಿಗಳ ಜನ್ಮದ ಬದುಕಿನ ಸರಪಳಿಯಂತೆ ರಾರಾಜಿಸುತ್ತದೆ. "ಜಡಮಾನವ"ನಿಂದ ಆರಂಭಿಸಿ ಸೃಷ್ಟಿಯನ್ನು ಸೌಂದರ್ಯ ಸಮೇತ ಸೂರೆಮಾಡುವ "ಪ್ರತಿಭಾಶಾಲಿ"ಯ ತನಕ, ಅವರವರ ಚಾಕಚಕ್ಯತೆಗನುಸಾರ, ಸೃಷ್ಟಿಯೊಂದಿಗೆ ಆಟವಾಡುವುದು ವಿಧಿಯ ಕಟ್ಟಾಜ್ಞೆಯೋ ಏನೋ! ಅತ್ಯಂತ ಉತ್ತರ—ದಕ್ಷಿಣ ಧ್ರುವಗಳ ತುದಿಯಲ್ಲಿ ಮತ್ತು ಸತಂಪಾತಾಳವಾದ ಸಮುದ್ರತಳದಲ್ಲಿ ಬೆಳೆಯುವ ಪಾಚಿ, ಶಿಲಾವಲ್ಕ್ಯಗಳನ್ನು ಪತ್ತೆಹಚ್ಚಿ, ಬಣ್ಣಬಣ್ಣವಾಗಿ ಕಾಗದದ ಮೇಲೆ ಅವುಗಳ ರೂಪುರೇಖೆಗಳನ್ನು ಸಹಜವೋ ಎಂಬಂತೆ ಪ್ರತಿಬಿಂಬಿಸುವುದರಲ್ಲಿಯೂ "ಸಸ್ಯವೈಭವ"ದ ಬ್ರಹ್ಮಾಂಡವನ್ನೇ ವಿಶದಪಡಿಸುತ್ತದೆ. ಮಾನವನ ನಿವಾಸಕ್ಕೆ ಅಸಾಧ್ಯವಾದ ಅಂಥಾ ಸ್ಥಳಗಳಲ್ಲಿ ವಾಸಿಸುವ ಜಲಚರಗಳ ಹಸಿವೆಯನ್ನು ಇಂಗಿಸುತ್ತಾ, ಸೃಷ್ಟಿಯ ಸಾರ್ಥಕತೆಯನ್ನು ಪ್ರಾರಂಭಿಸುತ್ತದೆ. ಹಾಗೂ, ಒಂದು ವೇಳೆ ಮಾನವನ ಪ್ರವೇಶದಿಂದ ಕಲಂಕ ಆರಂಭಿಸಿದರೂ, ಕೋಪಿಸಿಕೊಳ್ಳದೆ, ತಾಪವನ್ನು ಸೂಚಿಸದೆ, ಅವುಗಳ ಸೇವನೆಯಿಂದ ತನು ಉಳಿಸಿಕೊಂಡು ಕಾಲಹಾಕುವ ಜೀವಜಂತುಗಳನ್ನು, ಅವರಿಗೆ ನಿವೇದಿಸಿ ಜಗತ್ತಿನ ಚರಿತ್ರೆ ಭೂಗೋಳಗಳನ್ನು ಮುಂದುವರಿಸುತ್ತಾ "ಸಸ್ಯ ವೈಭವ"ವನ್ನು ನೂರ್ಮಡಿಸುತ್ತದೆ.

"ಬೆಟ್ಟದಾ ತುದಿಯೊಳಗೆ ನಟ್ಟನಡು ಅಡವಿಯೊಳು" ಅಖಿಲಾಂಡ ಕೋಟಿ ಪ್ರದರ್ಶನವನ್ನು ಕಾಣಬಹುದು. ಭೂಗುಣ, ವಾಯುಗುಣಕ್ಕನುಸಾರವಾಗಿ ಹೆಮ್ಮರ—ಮೊಮ್ಮರವಾಗಿ ಬೆಳೆಯುತ್ತಾ, ಬೇರು ಪೃಥ್ವಿಯನ್ನು ಪ್ರವೇಶಿಸಿ, ಭೂಮಧ್ಯದಲ್ಲಿ ಹರಿಯುವ ತರತರದ ಲವಣರಾಶಿಯನ್ನು ಅರಗಿಸಿಕೊಂಡ ನೀರನ್ನು ಸೇದಿಕೊಂಡು, ಮೇಲೆ ಬಹಿರಂಗವಾಗಿ ಸೂರ್ಯದೇವನ ಶಾಖ ಮತ್ತು ಕಿರಣ ಸ್ಪರ್ಶದಿಂದ ತನಗೆ ಬೇಕಾದ ಅನಿಲವನ್ನು ಬೇರ್ಪಡಿಸಿ

ಕೊಂಡು, ರೆಂಬೆ, ಎಲೆ, ಹೂ, ಕಾಯಿ, ಹಣ್ಣಾಗಿ ಬಿಡಿಸಿಕೊಂಡು ಮನುಷ್ಯ ನನ್ನು ಮುಗ್ಧನನ್ನಾಗಿ ಮಾಡುವುದು ಅತ್ಯಂತ ಆಶ್ಚರ್ಯಕರವೇ ಸರಿ! ಎಲ್ಲಿ ಪೈರು ಪಚ್ಚೆಗಳ ಸುಳಿವು ಇಲ್ಲವೋ, ಎಲ್ಲಿ ಹಸುರಾದ ಕಾನನ ಕಾಣುವು ದಿಲ್ಲವೋ, ಎಲ್ಲಿ ಗಿಡ ಮರ ಬಳ್ಳಿಗಳು ತಂಪಿನ ಕಂಪನ್ನು ಉತ್ಪತ್ತಿ ಮಾಡು ವುದಿಲ್ಲವೋ, ಅಲ್ಲಿ ಯಾವ ಜೀವಜಂತುವೂ ಜೀವಿಸುವುದಿಲ್ಲ. ಹುಲ್ಲು ಕಡ್ಡಿ ಯನ್ನು "ನಿಕೃಷ್ಟ"ವೆಂದು ಭಾವಿಸುವುದಾದರೂ, ಅದನ್ನು ತಿಂದು ಕಾಮಧೇನು (ಹಸು)ವಾಗಿ, ದೇವತೆಗಳ ನೈವೇದ್ಯಕ್ಕೆ ಪಾತ್ರವಾಗಿ, ಮಾನವನ ಶರೀರ ವನ್ನು "ಅಮೃತ"ರೂಪದಿಂದ ರಕ್ಷಿಸುತ್ತದೆ. ತಲೆ ತಗ್ಗಿಸಿಕೊಂಡು, ತನ್ನನ್ನೇ ನಂಬಿದ ಕುರಿ ಮೇಕೆಗಳ ಮೈಯಿಂದ "ತುಪ್ಪಟ"ವನ್ನು ಬೆಳೆಸಿ, ಜನತೆಯ ಹಾಸು ಹೊದಿಕೆಯ ನಿರ್ಮಾಣರೂಪವಾಗುತ್ತದೆ. ಉಲ್ಲಾಸದಿಂದ ಉಲಿ ದಾಡಿ, ನೆಗೆದಾಡಿ ಭುಜಿಸುವ 'ರಾಮಾಯಣದ ಸೀತೆಯ ಚಿನ್ನದ ಬಣ್ಣದ ಜಿಂಕೆಗಳ ಚರ್ಮವು' ಋಷಿಮುನಿಗಳ ಮತ್ತು ಸಾಧುಸಂತರ 'ಕೃಷ್ಣಾಜಿನ' ವಾಗಿ ಉಪಯೋಗಿಸಲ್ಪಡುತ್ತದೆ. ಒಯ್ಯಾರದಿಂದ ಸುತ್ತಾಡುತ್ತಾ ಮೆಲಕು ಹಾಕುವ ಕಸ್ತೂರಿಮೃಗದ ದೇಹದಿಂದ ಅಮೌಲ್ಯವಾದ, ಅಭಿಷೇಕಯೋಗ್ಯ ವಾದ 'ಕಸ್ತೂರಿ'ಯಾಗಿ ಜಗತ್ತನ್ನೇ ತನ್ನ ಸುಗಂಧ ಪರಿಮಳದಿಂದ ತುಂಬಿಸು ತ್ತದೆ. ಅವರಿಗೆ ಐಶ್ವರ್ಯವಂತರಿಗೆ ಮಾತ್ರ ಸುಲಭವಾದ ವಸ್ತುವಾಗುತ್ತದೆ! ಆಟವಾಡಿಕೊಂಡು ಮರದಿಂದ ಕಿತ್ತು ತಿಂದು ಬೆಳೆವ ಆನೆಯ ದಂತವಾಗಿ ಕುಶಲಕಲೆಗೆ ಆಧಾರವಾಗುತ್ತದೆ. ಆದಾಗ್ಯೂ ಬಡಬಗ್ಗರಾದಿಯಾಗಿ, ಬಲ ವುಳ್ಳವರ ಮನೆಯ 'ಬೆನಕರಾಯ' (ಪಿಳ್ಳೇರಾಯ)ನ ರೂಪವಾಗಿ ಎಲ್ಲಾ ಮಂತ್ರಾಕ್ಷತೆಗಳಿಂದ ಆರಾಧನೆ ಹೊಂದಿ, ಪರಿಪರಿಯ ವಿಘ್ನವನ್ನು ವಿನಾಶ ಮಾಡಿ ಮಾನವ ರಕ್ಷಕಮೂರ್ತಿ, ಮಹಿಮಾವಂತರ (ದೇವತೆಗಳ) ಮಧ್ಯೆ 'ವಿಘ್ನೇಶ್ವರ'ನಾಗಿ ಪ್ರತ್ಯಕ್ಷವಾಗುತ್ತದೆ! ಮುತ್ತಾಗಿ ಮೂಡುವ ಮಂಜಿನ ಬಿಂದುಗಳನ್ನು ಬೆಳಗ್ಗೆ ತನ್ನ ಗರಿಯ ಮೇಲೆ ನಿಲ್ಲಿಸಿಕೊಂಡು, ಸಂಭ್ರಮವಾಗಿ ಮೂಡಣದ ಚಿನ್ನದ ತೇರಿನಲ್ಲಿ ರಥಿಕನಾದ ಸೂರ್ಯನಿಗೆ ಆಹ್ವಾನಿಸುವ ಪ್ರಕೃತಿದೇವಿಯ ಕಂಠಹಾರವಾಗಿ ಅಲಂಕರಿಸುತ್ತದೆ!

ಸಾವಿರಾರು ವರ್ಷಗಳಿಂದ ಪರೀಕ್ಷೆ ನಡಸುತ್ತಲೇ ಇರುವ ಮನುಷ್ಯನ ಲೆಕ್ಕಕ್ಕೆ ಸಿಕ್ಕದಷ್ಟು ನಾರು ಬೇರಾಗಿ, ಗಿಡಗೆಂಟೆಯಾಗಿ, ತನ್ನನ್ನು ಭಕ್ಷಿಸುವ

ಪ್ರಾಣಿ, ಪಕ್ಷಿ, ಹುಳು, ಹುಪ್ಪಟೆಗಳನ್ನು ತರತರದ ಜಾತಿಯ ಜೀವಗಳನ್ನಾಗಿ ನಿರ್ಮಿಸುತ್ತದೆ. ಅಂದರೆ ಬೇರನ್ನು (ಗೆಡ್ಡೆಗೆಣಸು)ಗಳನ್ನು ತಿನ್ನುವವುಗಳೇ ಒಂದು ಜಾತಿಯ ಪ್ರಾಣಿಗಳು; ಎಲೆಗಳನ್ನು ತಿಂದು ಜೀವಿಸುವವುಗಳೇ ಮತ್ತೊಂದು ಜಾತಿಯವುಗಳು; ಆದರೆ, ಕಾಳು, ಕಡ್ಡಿ, ಸೊಪ್ಪುಸೆದೆಗಳನ್ನು ಅರಗಿಸಿಕೊಳ್ಳುವ "ನಾಗರಿಕ ಪ್ರಾಣಿ" ಎಂದರೆ "ಮುಕ್ಕಾಲು ಬುದ್ಧಿಯ ಮಾನವ!"

ಅಲ್ಲದೆ ಭೂಗರ್ಭದಲ್ಲಿ ಮೈಮರೆತು, ಲೋಹಗಳ ರೂಪಾಂತರಹೊಂದಿ ಖನಿಜಸಂಪತ್ತನ್ನು ಕೊಟ್ಟು ವಿಶ್ವದೈಶ್ವರ್ಯವನ್ನು ವೃದ್ಧಿಸಿ, ದೇಶ ವಿದೇಶಗಳ ಕೈಗಾರಿಕೆಗೆ "ಅಡವು ಆಸ್ತಿ"ಯಾಗಿ ನಿಂತು ಮನುಷ್ಯನ ಮೆದುಳನ್ನು ವಿಕಾಸ ಗೊಳಿಸುತ್ತಿರುವುದೇ "ಸಸ್ಯವೈಭವ!" ರಕ್ತದ ಅಣುಅಣುವಾಗಿ ಆರೋಗ್ಯ ವನ್ನು ತೂಗಿಸಿ, ಜ್ಞಾನವನ್ನು ವಿಸ್ತರಿಸಿ, ರಾಜ್ಯವನ್ನು ಅಭ್ಯುದಯಕ್ಕೆ ತರುವ ಮತ್ತು ಮಾನವತೆಗೆ ಮೋಕ್ಷ ಸಾಧಿಸುವ ಸತ್ಪ್ರಜೆಗಳಿಗೆ ಜನ್ಮಕೊಟ್ಟು ಸನಾತನ ಸದ್ಧರ್ಮ ಸಂಸ್ಕೃತಿ ಸಾಹಿತ್ಯ ಬೆಳೆಸಿ ಕಾಪಾಡುತ್ತದೆ—ರಸಭರಿತ ಬಲಕಾರಿ ಫಲಪ್ರದವಾದ "ಸಸ್ಯ ವೈಭವ!"

"ಮಾನವನ ಹುಟ್ಟು ಮರ್ಮ ತಿಳಿಯಲು" ಎಂಬ ಸರ್ವೋತ್ಕೃಷ್ಟ ಉಕ್ತಿ ಅಕ್ಷರಶಃ ನಿಜ. ಏಕೆಂದರೆ, ಊರು ಕೇರಿಯನ್ನು 'ಹೊಲಗೇರಿ' ಯನ್ನಾಗಿ ಮಾಡಿಕೊಂಡರೂ, ಮನುಷ್ಯನ ಬದುಕು ಭಿನ್ನಭಿನ್ನವಾಗಿ ಕವಲೊಡೆದು, ತನ್ನ ಪರಿಶೋಧನೆಯಲ್ಲಿ ತನ್ಮಯವಾಗುತ್ತಲೇ ಇದೆ. "ಸಸ್ಯ ಮಂಡಲಿ"ಯ ಫಲವಾಗಿ ಬಂದ ಕಾಳನ್ನೂ ಕಡ್ಡಿಯನ್ನೂ, ಎಲೆ, ದಳ, ಹಣ್ಣು ಗಳನ್ನೂ ಅರೆದು ಪುಡಿಮಾಡಿ, ರಸಮಾಡಿ, ಅವುಗಳಲ್ಲಡಗಿರುವ ಮೇಧಕ, ಬಾಧಕ, ಔಷಧಿಕ, ಸಾರಕ, ರಾಸಾಯನಿಕ ಭಾಗಗಳನ್ನು ವಿಂಗಡಿಸಿ ಅಳೆದು, ಕಾಯಿಸಿ (organic acids ಮುಂತಾದ) ರಸಮಾಡಲುದ್ಯುಕ್ತನಾಗಿರುತ್ತಾನೆ ಪ್ರಯೋಗಶಾಲೆಯಲ್ಲಿ, ರಸಾಯನ ಶಾಸ್ತ್ರದ ವಿಭಜಕರೂಪಿ, "ರಸಾಯನ ಶಾಸ್ತ್ರಜ್ಞ!" ಅವುಗಳ ಪ್ರಮಾಣ, ಪರಿಮಾಣ, ಘನತೆ, ಗಂಭೀರತೆ, ಗಣನೆ ಗಳನ್ನು ಅಳೆದು ಮೆಚ್ಚಿ ಹುಚ್ಚನಾಗುತ್ತಾನೆ "ಗಣಿತ ಶಾಸ್ತ್ರಜ್ಞ!" ಅವುಗಳ ಸ್ಥಿರ ಚರ ರೂಪು, ಪರಿಸ್ಥಿತಿ ಮತ್ತು ಅಂತಶ್ಯಕ್ತಿ ಬಹಿಶ್ಯಕ್ತಿಗಳನ್ನು ಪರೀಕ್ಷಿಸಿ, ವಿಶ್ವಸೃಷ್ಟಿಯ ಕೋನಗಳನ್ನು ಕಂಡುಹಿಡಿದು ಹಿಗ್ಗುತ್ತಾ ಅವುಗಳ

ಪ್ರಯೋಗದ ವೇಗ, ಕ್ರಮ, ಗುಣ, ದೋಷ ಮತ್ತು ದೇವಬಿಂದು (centres of gravity) ಗಳನ್ನು ಪತ್ತೆಹಚ್ಚುತ್ತಾನೆ, ದೈವೀಸಂಪನ್ನ "ಭೌತ ಶಾಸ್ತ್ರಜ್ಞ!" ಎಲ್ಲರಂತಲ್ಲದೆ ತಾನೇ ಒಂದು ವಿಧವಾಗಿ ಪಂದ್ಯಹೂಡಿ, ಸಸ್ಯಾಧಾರಿಗಳಾದ ಕ್ರಿಮಿ ಕೀಟಾದಿ ಪ್ರಾಣಿವರ್ಗಗಳ ಮೈಯನ್ನು ಸೀಳಿ "ಜೀವಾತ್ಮ"ನನ್ನು ಚೆಲ್ಲಾಪಿಲ್ಲಿಯಾಗಿ ಓಡಿಸಿ, ಹಿಂಸೆಯ ನೆರಳಲ್ಲಿ ಅಹಿಂಸಾಯುಕ್ತ ಸತ್ಯಾಂಶ ವನ್ನು ತೇಲಿಸುತ್ತಾ, ಬಾಹ್ಯ ಪ್ರಪಂಚವನ್ನೇ ಮರೆತು ತನ್ನದೇ ಸಾಮ್ರಾಜ್ಯ ಶಾಖೆಯಲ್ಲಿ ಮಗ್ನನಾಗಿರುತ್ತಾನೆ "ಪ್ರಾಣಿ ಶಾಸ್ತ್ರಜ್ಞ!" ಆದರೆ, ಪ್ರಕೃತಿಯ ಅಚ್ಚುಮೆಚ್ಚಿನ ಭಕ್ತನೋ, ಇಲ್ಲವೆ ಶಿಷ್ಯನೋ, ಅಥವಾ ಆರಾಧಕನೋ ಆಗಿದ್ದೇನೆ ತಾನೆಂದು ಮೆಲಕುಹಾಕುತ್ತಾ, ಮೇಲಿನ ಪ್ರಪಂಚದಲ್ಲೇ ತನ್ನ ಇರವು ನೆಲೆಯಾಗಿಸಿಕೊಂಡು, ದೈವಸೃಷ್ಟಿಯ ಅತಿಮನೋಹರವಾದ ಸಸ್ಯ, ಗಿಡ, ಮರ, ಲತೆ, ಹೂ, ಕಾಯಿ, ಹಣ್ಣು, ಎಲೆಯುಳ್ಳ ಕಾಳನ್ನು ನೋವಾಗ ದಂತೆ (ಇದು Botanyಯವರ ಸಂತೋಷದ ಭಾವನೆ ಇರಬಹುದು!) ಕತ್ತರಿಸಿ, ಕಾಡುಮೇಡುಗಳನ್ನು ಬರಿದುಮಾಡುತ್ತಾ, Central College ನಂತಹ ಭವ್ಯ ಮಂದಿರಗಳಲ್ಲಿ ಕಾಡು, ತೋಟ, ಹೊಲ, ಗದ್ದೆ, ಹೊಳೆ, ನದಿ ಮತ್ತು ಸಮುದ್ರವೆಂದು ಅಣಿಯಾಗಿ, ಬಣ್ಣ ಬಣ್ಣವಾಗಿ ಜೋಡಿಸಿಕೊಂಡು, ಎರಡೆರಡಾಣೆ ಪ್ರವೇಶ ಶುಲ್ಕವನ್ನು ವಸೂಲ್ಮಾಡುತ್ತಾ, ಜಿಡಗಿನ ಜೆಲೆಬಾಳುವ ಮೀನುಗಳನ್ನು ಆಡಿಸುತ್ತಾ, ನೋಡಬಂದವರ ಕಣ್ಣನ್ನು ದುರ್ಬೀನುಗಳಲ್ಲಿ ಕೆಡಹುತ್ತಾ, ಇತರರಿಗೆ (i e., other than Botany Students) ಆನಂದಾ ಶ್ಚರ್ಯಗಳನ್ನು ಹೆಚ್ಚಿಸುತ್ತಾ, ತಾವು ನಗುತ್ತಾ ವಿವರಿಸುತ್ತಾ, ಸಹಜವಾದ ಗಿಳಿಮರಿಗಳನ್ನು ಅಣಕಿಸುವುವೋ ಎಂಬಂತೆ ಅಂದವಾಗಿ ಅಲಂಕರಿಸಿ, ಪ್ರಕೃತಿಯನ್ನು ಸೆರೆ ಹಿಡಿದುಕೊಂಡ ಕುಶಲರು ತಾವೆಂದು ನೈಜವಾದ ಉಬ್ಬಿದ ಮನಸ್ಸಿನಿಂದ "ಸಸ್ಯ ವೈಭವ"ವನ್ನು ಕಲೆಯ ಆರಾಧಕರಂತೆ ಅದ್ಧೂರಿಯಾಗಿ ಅಣಕಿಸುತ್ತಾರೆ, "ಸಸ್ಯ ಶಾಸ್ತ್ರಜ್ಞ" ಪುಣ್ಯಾತ್ಮರು!

ಈ ಎಲ್ಲಾ ತರದ ಹಿಂಸೆಯನ್ನೂ ಕಂಡು ಸಹಿಸದ ಮಹಾಭಕ್ತರೂ ಮಾನವದೂರರೂ ಆದ ಮಹಾಮುನಿಗಳ ಪಂಗಡದವರು ಮಹಾರಣ್ಯಗಳ ಮಧ್ಯದಲ್ಲಿಯೇ ಮಿಂದು, ಕಂದಮೂಲಗಳನ್ನೇ ಕಿತ್ತು ತಿಂದು, ಮರದಡಿಯಲ್ಲಿ ಕೂತು ವಿಶ್ರಮಿಸಿಕೊಂಡು, ಜಪತಪಗಳನ್ನು ಸಾಂಗೋಪಾಂಗವಾಗಿ ಸಲ್ಲಿಸುತ್ತಾ

ಭೂವ್ಯಾಕಾಶಗಳ ಅಂತರದಲ್ಲಿ ದೃಷ್ಟಿಯನ್ನು ನೆಟ್ಟು, ಭೂಭಾರ ಇಳಿಸಲು ಮುಗಿಲ ಮಳೆ ಸುರಿಸಲು, ಮರೆಯಾಗಿಯೇ ಅಲ್ಲಿ ವಾಸಿಸುತ್ತಾರೆ!

ರೈತನಾದರೋ ಅರೆಬಟ್ಟೆ ಹೊದೆದು, ಪಾಪಪೂರವಾದ ಮೂಕ ಪ್ರಾಣಿಗಳೊಡನೆ ಹೋಗುತ್ತಾ, ಬಿಸಿಲು ಮಳೆ ಚಳಿ ಎನ್ನದೆ ಶ್ರಮಪಡುತ್ತಾ, ಆಯಾಸ ನೀರಡಿಕೆಗಳ ಪರಿವೆಯಿಲ್ಲದೆ ಮರುಭೂಮಿ ಬಂಜರು ಭೂಮಿಗಳನ್ನು ಸೀಳಿ ಸಾಗುವಳಿ ಮಾಡುತ್ತಾ, ದೇಶದ ಆರ್ತನಾದಕ್ಕೆ ಉತ್ತರವಾಗಿ "ಅಶನ"ದ ಹವಣಿಕೆಯಲ್ಲಿ ಮೈಮರೆತು ದುಡಿಯುತ್ತಾನೆ!

"ಸಹಾರಾ"ದಂತಹ ಸರಹದ್ದಿನಲ್ಲಿಯೂ, ಬೆಂಕಿಯ ಜ್ವಾಲೆಯೇ ಒಂಟೆಗಳ ಮೂಗಿನಿಂದ ಹೊರಡುವಾಗ, ಯಾತ್ರಿಕರು ಬಿಸಿಲ್ಗುದುರೆಗಳ ಮೋಸದಿಂದ ನೊಂದು ಬದುಕಿನಾಸೆ ಬಿಟ್ಟಿರುವ ಅವರಿಗೆ ಸ್ವರ್ಗದ ಬಾಳನ್ನು ಸವಿಸಲು, ಹಸಿವು ನೀರಡಿಕೆಗಳನ್ನು ಶಮನ ಮಾಡಲು, ಅಲ್ಲಲ್ಲೇ "ಓಯಸಿಸ್" ಗಳಿರುವೆಡೆಗಳಲ್ಲಿ ಖರ್ಜೂರ, ದ್ರಾಕ್ಷಿ, ಹುಲ್ಲು ಆದಿ ಸಸ್ಯಗಳು ಫಲಗಳನ್ನು ಹೊತ್ತು ಪ್ರತೀಕ್ಷಿಸುತ್ತವೆ.

"ನನ್ನದೇನೂ ಪಾಪವಲ್ಲ! ಬಹಳ ಪುಣ್ಯಕಾರಿ!" ಎಂದು ಬಡಗಿ ಮರವನ್ನು ಕೊರೆದು, "ಕುಶಲಕಲೆ"ಯನ್ನು ಕುಣಿಸುತ್ತಾ ಉಪಯುಕ್ತವಾದ ಪದಾರ್ಥಗಳನ್ನು ಕೆತ್ತಿ, ಸಮಾಜದ ಬಾಳಿಗೆ ಬೇಕಾದ "ಉಪಯೋಗಿ"ಯಾಗಿ ಬಾಳುತ್ತಾನೆ. ಜೊತೆಗೆ ಗಂಧದ ಮರದ ನಾಜೋಕಾದ ಕೆಲಸದಿಂದ ಮೈಸೂರಿಗೆ ಕಲಶ ತಂದಿದ್ದಾನೆ.

ಬಳ್ಳಿಯಾಗಿ ಬಂದರಿಕೆ ಹೊಡೆದ ಚಿನ್ನದಿಂದ ಮತ್ತು ಮರಗಳು ಭೂಮಿಯ ಪದರಗಳಲ್ಲಿ ಬೆರೆತು, ಶಾಖ ಒತ್ತಡಗಳ ಅವಾಂತರದಿಂದ ಕಲ್ಲಿದ್ದಲು, Graphite ಮತ್ತೆ ವಜ್ರಗಳಾಗಿ "ಮರುರೂಪಾಂತರ" ಹೊಂದಲು, ಪುಟಕ್ಕೆ ಹಾಕಿ ಕಾಯಿಸಿ, ಅರೆದು ಕೊಯ್ದು ಕತ್ತರಿಸಿ, ಮನೆಗಳ "ಚಿರವಸ್ತು" ಬೆಲೆ ಬಾಳುವ ಒಡವೆಗಳಿಂದ ಹಿಡಿದು ಅರಸನ ತಲೆಯ ಥಳಥಳಿಸುವ ಕಿರೀಟವಾಗಿ ಕಟ್ಟಿ ಸುಖಿಯಾಗಿರುತ್ತಾನೆ ಚುರುಕು ಬುದ್ಧಿಯ ಅಕ್ಕಸಾಲೆ!

ಉಪ್ಪುನೇರಿಳೆ ಸೊಪ್ಪನ್ನು ಸೀಳಿಹಾಕಿ ರೇಷ್ಮೆಹುಳುಗಳಿಗೆ ತಿನ್ನಿಸಿ, ಬೆಳೆಸಿ ಪುಷ್ಟಮಾಡಿ ಬಹಳ ಉತ್ತಮವಾದ ರೇಷ್ಮೆದಾರವನ್ನು ಸುತ್ತಿಕೊಂಡು, ಕೈಗಾರಿಕೆಯ ನಾಣ್ಯವನ್ನು ಆರಂಭಿಸಿ, ಬಣ್ಣ ಬಣ್ಣಗಳನ್ನು ಗಿಡದ ರಸಗಳಿಂದ

ಅರೆದುಕೊಂಡು, ಶ್ರೇಷ್ಠವಾದ ಮತ್ತು ರಮಣೀಯವಾದ ಪೀತಾಂಬರಗಳನ್ನು ನೆಯ್ದು, ದೇಶವಿದೇಶಗಳಲ್ಲಿಯೂ ಉಡುಪಿನ ಕೊರತೆಯನ್ನು ನೀಗಿಸುತ್ತಾನೆ "ನೆಯ್ಗೆಯವ." ನಾರುಗಳಿಂದ, ಹತ್ತಿಯಿಂದ ದಾರ, ಚೀಲ, ಸಾಧಾರಣ ಬಟ್ಟೆಗಳು, ಹಗ್ಗ ಆದಿಯಾಗಿ ಹೊಸೆದು ಜನತೆಯ ನಿತ್ಯಜೀವನದ ಸಾಧನ ಸಂಪತ್ತಾಗಿ ಉಳಿಯುತ್ತಾನೆ.

ಎಣ್ಣೆಯ ಬೀಜಗಳನ್ನು, ಗಂಧದ ಮರದ ತುಂಡುಗಳನ್ನು ಗಾಣದಲ್ಲಿ ನುಣ್ಣಗೆಮಾಡಿ, ಹಬೆಯಲ್ಲಿ ಬೇಯಿಸಿ, ತಲೆಯ ತೈಲದಿಂದ ವೊದಲ್ಗೊಂಡು, ಅರಸಿನ ಕುಂಕುಮದ ಜೊತೆಗೆ "ಗಂಧ"ವಾಗಿ ತೆಗೆದು, ಲೋಕದ ನಂದಾದೀಪವನ್ನು ಬೆಳಗಿಸಿದ್ದಾನೆ "ಗಾಣಿಗ."

ತರತರದ ಹೂಗಳ ಅಮೃತಪಾನಮಾಡಿ, ಗೂಡುಕಟ್ಟಿ, ಜೇನುತುಪ್ಪವನ್ನು ಶೇಖರಿಸಿದ ಜೇನುಹುಳುಗಳನ್ನು ಓಡಿಸಿ, ಜೇನನ್ನು ಅಪಹರಿಸಿ, ಮೇಣದಿಂದ ಪ್ರಯೋಗಶಾಲೆಗೂ ಮನೆಮಠಗಳಿಗೂ ಅವಶ್ಯವಾದ ಸಾಧನಗಳನ್ನು ಮಾಡಿಕೊಡುತ್ತಾನೆ ಜೇನು ಹುಳುಗಳ ಪಾಲಕ.

ಹಸಿಯ ಮತ್ತು ಹದವಾದ, ಒಣಗಿದ ಮತ್ತು ಒರಟಾದ ಗಿಡಮೂಲಿಕೆ ವೊದಲಾದ "ಸಸ್ಯವೈಭವ"ದ ಪ್ರಪಂಚದ ಅಸ್ತಿತ್ವವನ್ನು ಹಾರಿಸಿಕೊಂಡು ಪ್ರಯೋಗ ನಡಸಿ, ಸಿದ್ಧೌಷಧಿಗಳನ್ನು ತಯಾರಿಸಿ, ಭಾರತದ ಹೆಸರಾಂತ "ಆಯುರ್ವೇದ"ದ ಆಯುಸ್ಸನ್ನು ಕಾಪಾಡುತ್ತಾ, ನೊಂದ ಜನಸಮೂಹದ ನೋವನ್ನು ದೂರಮಾಡಿ, ನಲಿಸುತ್ತಾನೆ "ಆಯುರ್ವೇದದವ ಪಂಡಿತ!"

ಹೂ, ತರಕಾರಿ, ಹಣ್ಣುಹಂಪಲಾದಿಯಾಗಿ, ಸೊಪ್ಪು ಸೆಣಬುಗಳನ್ನು ಕೂಡಿಸಿಕೊಂಡು ಪಟ್ಟಣಗಳ ರಕ್ತನಾಳವನ್ನು ಬದುಕಿಸುತ್ತಾನೆ "ತೋಟಗಾರ." ಜೊತೆಗೆ ಮಾರ್ಕೆಟ್ಟಿನ ನಿರ್ಮಾಣವನ್ನು ಮಾಡಿ "ಮುನಿಸಿಪಾಲಿಟಿ"ಯ ಅಂಗ ಒಂದು ನಿಲ್ಲದೆ ದುಡಿಯುತ್ತದೆ.

ಕಬ್ಬುಗಳನ್ನು ಕತ್ತರಿಸಿ, ರಸವನ್ನು ಹಿಂಡಿದ ಹಿಪ್ಪೆಯಿಂದ "ಜಪಾನು" ಸಾಮಾನುಗಳನ್ನು ಕಟ್ಟಿ ವ್ಯಾಪಾರಮಾಡುತ್ತಾ, ರಸದಿಂದ ಬೆಲ್ಲ, ಸಕ್ಕರೆ, ಮತ್ತು 'ಬೀರು'ಗಳನ್ನು ತಯಾರಿಸುತ್ತಾ ಇವೆ, ಸಕ್ಕರೆ ಕಾರ್ಖಾನೆಗಳು. ಬೆಲ್ಲ ಸಕ್ಕರೆಗಳ ಸವಿಯನ್ನೇ ಹಿಂಬಾಲಿಸಿ "ಬೀರಿ"ನ ಅಮಲು ತಲೆಗೇರಿ ಜನ ಕಂಗೆಟ್ಟಿದ್ದಾರೆ!

ಬೊಂಬು, ತರಗೆಲೆ, ಹಳೆಯ ಹತ್ತಿಯ ಬಟ್ಟೆ ಮುಂತಾದವುಗಳನ್ನು ಕೊಳೆಯಿಸಿ, ಕಾಯಿಸಿ, ವಿಧವಿಧ ಯಂತ್ರಗಳಲ್ಲಿ ಜೀರ್ಣಿಸಿ ರೇಷ್ಮೆಬಟ್ಟೆಯಂತೆ ಮೃದುವಾದ ಮತ್ತು ಎಲ್ಲಾ ತರಹ ಕಾಗದವನ್ನೂ ಉತ್ಪತ್ತಿ ಮಾಡುವ ಕಾಗದದ ಕಾರ್ಖಾನೆ ಭದ್ರಾವತಿಯಲ್ಲಿ ಕಾದಿಲ್ಲವೆ?

ಮಲೆನಾಡಿನ ಕಾಫಿ ಬೀಜದ ಪುಡಿಯ ಹುಚ್ಚು ಜನಕ್ಕೆ ಹೆಚ್ಚಿ, ಹುಣಿಸೆ ಬೀಜದ, ಈಚಲುಬೀಜದ ಮತ್ತು ಜೋಳದ "ಹುರಿಹಿಟ್ಟು" ಬೆರೆತು, ಕಾಫಿಯ ರುಚಿಯೇ ಕೆಡುತ್ತಾ ಇದೆ. ಅಲ್ಲಿನ "ಟೀ ಸೊಪ್ಪು" ಎಂಬುದು ರವಾನೆ ಯಾಗಿ, ಮಿಕ್ಕ ಧೂಳಿನ ಪಾನಕದಿಂದ "ಟೀ"ಯ ಮಾಧುರ್ಯ ಕಳೆದು ಹೋಗುತ್ತಿದೆ!

ಹೀಗೆಲ್ಲಾ ವಿಭವದ "ಸಸ್ಯವೈಭವ"ವನ್ನು ಕಂಡು ಹೆಸರುಬೇಳೆ, ಕಡಲೆ ಬೇಳೆ, ಮೆಣಸು ಬೆರಸಿದ ಬೇಲದ ಪಾನಕ, ಗಿಡದಿಂದ ಕಿತ್ತ ಬಾಳೆಹಣ್ಣು, ಮರದಿಂದ ಇಳಿಸಿದ ಎಳನೀರುಗಳನ್ನು, ಬಳ್ಳಿಯಿಂದ ಬಿಡಿಸಿದ ವೀಳ್ಯವನ್ನು ಭವ್ಯಮಂದಿರದಲ್ಲಿ ಭಗವಂತನಿಗೆ ಅರ್ಪಿಸಿ ಅರ್ಚನೆ ಮಾಡುವ ಅರ್ಚಕರಿಂದ ತೀರ್ಥಪ್ರಸಾದಗಳನ್ನು ಪಡೆದು, ನೆಲದ ಮೇಲೆ ಭೌತದ ಕಾಲು ಹರಿಯು ತ್ತಿದ್ದರೂ ಆಕಾಶದಲ್ಲಿ ವಿಮಾನವೇಗವನ್ನು ಮೀರಿಸಿ ಸಂಚರಿಸುತ್ತಾ, ಬ್ರಹ್ಮಾಂಡಕಾಂಡಗಳಲ್ಲಿನ ಬದುಕುವ ಸಂಪತ್ತನ್ನು ಕಣ್ಣಾರೆ ಕಾಣುತ್ತಾ, ನಾಕ ನರಕ ತ್ರಿಶಂಕುಗಳ ಮೂಲಾಧಾರವಾದ, ವರ್ಣನಾತೀತವಾದ ಬಣ್ಣಿಸಲಸದಳವಾದ ಸೌಂದರ್ಯ ಶಿರೋಮಣಿ, ಪರಮಾತ್ಮರೂಪೀ ಸೊಬಗಿನ "ಸಸ್ಯವೈಭವ"ವನ್ನು ಅಡಿ—ಹಂಜರಗಳ ಮಧ್ಯೆ ಸಿಕ್ಕಿಕೊಂಡು ಬಡಿದು ಕೊಳ್ಳುವ ಹೃದಯ "Camera"ದಲ್ಲಿ ಪ್ರತಿಬಿಂಬಿಸಿಕೊಂಡು ಕೆಳಗಿಳಿದು, ಮನಸ್ಸಿನ ಮಧುರ ಆಲಾಪನೆಗಳೆಂಬ ಅಲೆಗಳಿಗೆ ಮೆರಗು ಕೊಟ್ಟು ರೂಪಿಸಿ, "ಸಾಹಿತ್ಯದ ಕೈಸೆರೆ"ಯಾಗಿ ಭಟ್ಟಿ ಇಳಿಸಲು ತವಕಿಸುತ್ತಾ ಇರುವ "ಕವಿ ಶಿರೋಮಣಿ"ಯ ತಲೆಯನ್ನು ತಣ್ಣಗೆ ಇಟ್ಟು ತೇಜಸ್ಸು ಹೆಚ್ಚಿಸಲು ರಾತ್ರಿಯೆಲ್ಲಾ ಗಿಡಗಳು ಇಂಗಾಲಾಮ್ಲವನ್ನು ಕುಡಿದು ಬಿಟ್ಟ ಆಮ್ಲಜನಕ ವನ್ನು ಒತ್ತಡವಾಗಿ ಪೂರ್ವದಿಂದ ಪಶ್ಚಿಮಕ್ಕೆ ನುಗ್ಗಿಸುತ್ತದೆ ನಿಶ್ವಾಸ ವೈಭವ. ಸಸ್ಯ ಪ್ರೇಮಿಗಳಾದ ಮೋಡಗಳು ಪಂದ್ಯಕಟ್ಟಿಕೊಂಡು ಸೂರ್ಯನನ್ನು ಮುಚ್ಚಿ ಗಿಡ ಬಂಡೆಗಳಲ್ಲಿ ತನುವನ್ನು ಉಳಿಸಿವೆ. ಎಷ್ಟು ದೂರ ನಡೆದೆನೋ ತಿಳಿಯದು.

ಅಂತೂ ಬೆಳೆದ ಗರಿಕೆಯ ನಡುವೆ "ನಾಗ" ಹೆಡೆ ಬಿಚ್ಚಿ ಹಾಡುವ ರಾಗಕ್ಕೆ ಸೋತು ಹತ್ತಿರ ಹತ್ತಿರ ಬರುತ್ತಿದ್ದರೂ, ಸುತ್ತಣ ಸುರಗಿ, ಸಂಪಿಗೆ, ಜಾಜಿ, ಕೇದಗೆ, ಪಾರಿಜಾತಗಳ ಧೂಳು (Pollen grains) ಹರಡುತ್ತಾ, ಹಣ್ಣು ಗಳುಳ್ಳ ಮರಗಳ ಮೇಲಿನ ನಾನಾ ಹಕ್ಕಿಗಳ "ತ್ಯಾಗರಾಜ" ಕೀರ್ತನೆ ನಡೆಯುತ್ತಿರಲು, ನವಿಲು ಕುಣಿಯುತ್ತಿರಲು, ಮೊಲ ಕಿವಿಯನ್ನು ನಿಮಿರಿಸಿ ಕೊಂಡು ಓಡಾಡುತ್ತಿರಲು, ಜೇನು ಜೀರುಂಡೆಗಳ ಝೇಂಕಾರದ ತಂಬೂರಿ ಯನ್ನು ಮೀಟುತ್ತಿರಲು, ಮೀಟಿಗೆ ತಾಳವಾಗಿ ಜಿಂಕೆ ನೆಗೆಯುವಾಗ ನಮ್ಮ ಪ್ರಾಚೀನ ವಂಶಜರಾದ "ಕಪಿ ಮಂಡಲಿ"ಯವರು ನಿಶ್ಚಿಂತೆಯಾಗಿ ಮರದ ಹಣ್ಣುಗಳನ್ನು ಸವಿದು, ನಿರಾಯಾಸವಾಗಿ ರೆಂಬೆಯಿಂದ ರೆಂಬೆಗೆ ಹಾರಾಡುವ ಚಿತ್ರವನ್ನು ಕಾನನವೇ ಮೆಚ್ಚಿ ತಲೆದೂಗುವಾಗ ನರ ತನ್ನ ಪ್ರಬಂಧ—ಕಾವ್ಯಗಳನ್ನು ಮುಗಿಸುತ್ತಾ ಇದ್ದಾನೆ. ಆದಾಗ್ಯೂ ತೃಪ್ತಿಯ ಮುಖಮುದ್ರೆ ಕಾಣಲಿಲ್ಲ. ಕಡೆಗೊಂದು ನಿಟ್ಟುಸಿರು ಬಿಡುತ್ತಾ, ತಲೆಯನ್ನು ಎತ್ತಿ ಮೇಲಕ್ಕೆ ನೋಟವನ್ನು ಬೀರಿ, "ಎಷ್ಟಾದರೂ ಮಾನವ ಪೂರ್ಣನಾಗ ಲಾರ! ಪ್ರಕೃತಿಯು ಹಿಂಬಾಲಿಸುತ್ತಾ ಬಂದರೂ, ಇವನು ಶೋಧಿಸುತ್ತಾ ಮುಂದುವರಿದರೂ, ಕಾಣಲರಿಯದ ವಿಶ್ವದಾಚೆಯ ಗುಟ್ಟು ಬಹಳವುಂಟು! ಪಾಪ! ಅಸಹಾಯ ಮಾನವ!" ಎಂದು ಸುತ್ತಲೂ ಕತ್ತನ್ನು ಹೊರಳಿಸುವನು.

ವಾಚಕರೇ! ಒಮ್ಮೆ ಮಲೆನಾಡ ಮೆರೆವ ದೃಶ್ಯಸಂಪತ್ತನ್ನಾಗಲಿ, ಬಯಲುನಾಡಿನ ಭಾರಿಯ ಐಸಿರಿಯನ್ನಾಗಲಿ (ಬರಿ ಪುಸ್ತಕವಲ್ಲಲ್ಲ!) ಒಟ್ಟಿನಲ್ಲಿ "ಸಸ್ಯ ವೈಭವ"ವನ್ನು ನೋಡಿರುವಿರಾ? ನೋಡಿದ್ದರೆ ನೀವೇ ಧನ್ಯರು!

**ಚಿ. ನಂ. ಗಂಗಾದೇವಿ**

## ಆನೆ—ಶ್ವಾನ

ಆನೆ ಬೀದಿಲಿ ಬರಲು ಶ್ವಾನ ತಾ ಬೊಗಳುವದು
ಶ್ವಾನನಂತಾನೆ ಬೊಗಳಿದರೆ—ಆನೆಯ
ಮಾನವೇ ಹಾನಿ ಸರ್ವಜ್ಞ.

# "ವೈದ್ಯನ ವ್ಯಾಧಿ"

[30-11-53 ರಂದು ಸಂಘದಲ್ಲಿ ಕೈಲಾಸಂ ಕಾವ್ಯೋತ್ಸವವಾದಾಗ ಓದಿದ್ದು.]

ನಾನು ಆರಿಸಿಕೊಂಡಿರುವ ನಾಟಕ: ಕೈಲಾಸಂ ಅವರ "ವೈದ್ಯನ ವ್ಯಾಧಿ." ಇದಕ್ಕೆ ಮತ್ತೊಂದು ಹೆಸರು ಉಂಟು: "ನೆರೆಹೊರ್ಕೆ ನೆರೆಹೊರ್ಕೆ ನೇವೇಯೆ" ಎಂದು. ಕೃತಿ ಬಹಳ ಚಿಕ್ಕದು. ಪ್ರಾಯಶಃ ಅರ್ಧಘಂಟೆಗಿಂತ ಕಡಮೆ ಕಾಲ ಸಾಕು ಇದನ್ನು ಓದಲು. ಕೃತಿ ಸಣ್ಣ ಎಂದರೆ ಕೃತಿಯನ್ನು ಓದಲು ಅಥವಾ ಅಭಿನಯಿಸಲು ಹೆಚ್ಚು ಕಾಲ ಬೇಕಿಲ್ಲ, ಎಂದರ್ಥ. ಆದರೆ ಕೃತಿಯನ್ನು ಓದಿ ಮನನಮಾಡಿಕೊಳ್ಳಲು ಎಷ್ಟು ಕಾಲ ಬೇಕು ಎಂಬ ದೃಷ್ಟಿಯಲ್ಲಿ ಕೃತಿ ಸಣ್ಣದೇನಲ್ಲ. ಕೈಲಾಸಂರವರ ಯಾವ ಕೃತಿಯೂ ಸಣ್ಣದಲ್ಲವೇ ಅಲ್ಲ, ಈ ದೃಷ್ಟಿಯಿಂದ.

ಕೈಲಾಸಂ ಎಲ್ಲ ವಿಧದಲ್ಲಿಯೂ ಒಂದು ವೈಶಿಷ್ಟ್ಯವನ್ನು ಪಡೆದಿದ್ದವರು ಅವರ ಜೀವನವೇ ಒಂದು ವೈಶಿಷ್ಟ್ಯ. ಅವರು ತಮಿಳರು. ತಮಿಳರಾದರೂ ಕನ್ನಡ ನಾಟಕ ಸಾಹಿತ್ಯದಲ್ಲಿ ಅವರು ನಡಸಿದಷ್ಟು ಕ್ರಾಂತಿ ಇನ್ನಾರಿಂದಲೂ ನಡೆದೇ ಇಲ್ಲವೆಂದು ಹೇಳಬಹುದು. ಅವರ ವಿದ್ಯಾಭ್ಯಾಸವೂ ಸಾಹಿತ್ಯ ಜೀವನಕ್ಕೆ ಹೊಂದಿಕೊಂಡದ್ದೇನಲ್ಲ. ಅವರು ಓದಿದ್ದು ಭೂಗರ್ಭಶಾಸ್ತ್ರವನ್ನು, ಅದೂ ಇಂಗ್ಲೆಂಡಿನಲ್ಲಿ. ಭೂಗರ್ಭಶಾಸ್ತ್ರವನ್ನು ಓದಿ ಅಲ್ಲಿನ ಇಲಾಖೆಯಲ್ಲಿ ಯಾವುದೋ ಕೆಲಸಕ್ಕೆ ಸೇರಬೇಕಾದವರು ಸಾಹಿತ್ಯರಂಗಕ್ಕೆ ಬಂದರು. ಸಾಹಿತ್ಯ ರಂಗದಲ್ಲೂ ಅವರದೇ ಒಂದು ವೈಶಿಷ್ಟ್ಯ. ಇಂದಿನ ಜನರು ಮಾತನಾಡುವ ಭಾಷೆಯನ್ನೇ ಕೃತಿಗಳಲ್ಲಿ ಉಪಯೋಗಿಸಿ, ಒಂದು ಕ್ರಾಂತಿಯನ್ನೇ ಎಬ್ಬಿಸಿದರು. ನಾಟಕರಂಗದ ಮೇಲೆ ಅದುವರೆಗೂ ಅಭಿನೀತವಾಗದೆ ಇದ್ದ ವಿಡಂಬನ ಪೂರ್ವಕವಾದ ನಾಟಕಗಳನ್ನು ತಂದರು. ಆ ನಾಟಕಗಳಲ್ಲೂ ಅದುವರೆಗೆ ನಾಟಕರಂಗದ ಮೇಲೆ ಬಾರದ ವಿಧವೆಯರೇ ಮೊದಲಾದ ಪಾತ್ರಗಳನ್ನು ತಂದರು. ಇಂಥವಕ್ಕೆ ಇಂಗ್ಲಿಷಿನಲ್ಲಿ 'originality' ಎನ್ನುತ್ತಾರೆ. ಈ 'originality' ಯನ್ನು ತಮ್ಮ ನಾಟಕಗಳ ಶೀರ್ಷಿಕೆಗಳಲ್ಲೂ ತಂದಿದ್ದಾರೆ. ಅವರ ನಾಟಕಗಳ ಶೀರ್ಷಿಕೆಗಳನ್ನು ನೋಡಿ: "ಮಕ್ಕಳಿಸ್ಕೂಲ್ ಮನೇಲಲ್ವೇ" —"ನೆರೆಹೊರ್ಕೆ ನೆರೆಹೊರ್ಕೆನೇವೇಯೇ"—"ತಾಳೀಕಟ್ಟೋಕ್ಕೂಲೀನೇ"—

"ಬಂಡ್ವಾಳ್ವಿಲ್ಲದ ಬಡಾಯಿ" ಇತ್ಯಾದಿ. ಪ್ರತಿಯೊಂದು ಹೆಸರೂ ಒಂದೊಂದು ಗಾದೆಯಂತಿದೆ. ಯಾರೋ ಹಳೆಯವರು ಕಟ್ಟಿದ ಗಾದೆಯನ್ನು ಕದ್ದು ಉಪಯೋಗಿಸಿದ್ದಾರೋ ಎನ್ನಿಸುತ್ತದೆ. ಅಷ್ಟು ಚೆನ್ನಾಗಿವೆ ಆ ಪದಗಳ ಜೋಡಣೆ. ಗಾದೆಯಲ್ಲಿರಬೇಕಾದ ಎಲ್ಲ ಗುಣಗಳೂ ಆ ಶೀರ್ಷಿಕೆಗಳಲ್ಲಿ ಕಂಡು ಬರುತ್ತವೆ. ಗಾದೆ ಒಂದು ವ್ಯಾರಾ ಅಥವಾ ಪೇಜು ಆದರೆ ಅದು ಗಾದೆಯಲ್ಲ. ಅವು ಸೂತ್ರಗಳಂತೆ ಇರಬೇಕು. ಕೇಳಲು ಹಿತವಾಗಿರುವಂತೆ ಪ್ರಾಸವಿರಬೇಕು. ಎಲ್ಲಕ್ಕೂ ಹೆಚ್ಚಾಗಿ ಜೀವನದ ಸಿತ್ಯಸಮಸ್ಯೆಯನ್ನು ಕುರಿತದ್ದಾಗಿರಬೇಕು. ಜೊತೆಗೆ ಸ್ವಲ್ಪ ಹಾಸ್ಯಾಂಶವೂ ಸೇರಿರಬೇಕು. ಇಷ್ಟೆಲ್ಲಾ ಗುಣಗಳೂ ಈ ನಾಟಕದ ಶೀರ್ಷಿಕೆಯಾದ 'ನೆರೆಹೊರ್ಕೆ ನೆರೆಹೊರ್ಕೆನೇವೆಯೇ' ಎನ್ನುವುದ ರಲ್ಲಿ ತೋರಿಬರುತ್ತವೆ. ಈ ತೆರದ ವಾಕ್ಯಗಳನ್ನು ಮಾಡುವುದು ಸುಲಭವಲ್ಲ. ಈ ಸಭೆ ಮುಗಿಯುವುದಕ್ಕೆ ಮುಂಚೆ ನಿಮ್ಮದೇ ಆದ ಗಾದೆಯೊಂದನ್ನು ಕಟ್ಟಿ ಹೇಳುತ್ತೀರಾ ನೋಡೋಣ? ಇದರ ಮತ್ತೊಂದು ಶೀರ್ಷಿಕೆ 'ವೈದ್ಯನ ವ್ಯಾಧಿ' ಎಂದು. ರವೀಂದ್ರನಾಥ ಠಾಕೂರರ ಪದ್ಯಸಂಕಲನವಾದ 'ಗಾರ್ಡ್‌ನರ್' ಎಂಬುದರ ಶೀರ್ಷಿಕೆಯನ್ನೋದಿದರೆ, ಯಾವನೋ ಒಬ್ಬ ಬಡಪಾಯಿ ತೋಟ ಗಾರನ ಮೇಲೆ ಕುರಿತು ಬರೆದ ಪದ್ಯವೊಂದಿರಬಹುದು ಎನ್ನಿಸುತ್ತದೆ. ಆದರೆ ಅದನ್ನು ತೆರೆದು ನೋಡಿದರೆ 'ತೋಟಗಾರ'ನ ಸುದ್ದಿಯೇ ಬರುವುದಿಲ್ಲ. ಅದೇ ರೀತಿ ಈ "ವೈದ್ಯನ ವ್ಯಾಧಿ" ನಾಟಕದಲ್ಲೂ ವೈದ್ಯನ ಪಾತ್ರವೂ ಇಲ್ಲ, ವ್ಯಾಧಿಯೂ ಇಲ್ಲ. "ವೈದ್ಯನ ವ್ಯಾಧಿ" ಎಂಬ ಹೆಸರು ನೋಡಿದ ತತ್‌ಕ್ಷಣ ಒಂದು ವಿಧವಾದ ಕುತೂಹಲ ತೋರಿಬರುತ್ತದೆ: "ವೈದ್ಯನಿಗೆ ಅದಾವ ವ್ಯಾಧಿ?" ಎಂದು. ಕಡೆಯವರೆಗೂ ವೈದ್ಯನೂ ವ್ಯಾಧಿಯೂ ಕಾಣದೇ ಇದ್ದರೂ, ಓದಿದ್ದು ವ್ಯರ್ಥವಾಗಲಿಲ್ಲವೆನ್ನಿಸುತ್ತದೆ. ಪ್ರಾಯಶಃ ನಿಮಗನ್ನಿಸಿರಬಹುದು, 'ಶೀರ್ಷಿಕೆಯ ಮೇಲೆ ಇಷ್ಟೆಲ್ಲಾ ಹೇಳಬೇಕೆ?' ಎಂದು. ಆದರೆ ಯಾವ ಕೃತಿ ಯಲ್ಲೇ ಆಗಲಿ ಶೀರ್ಷಿಕೆಗೇ ಪ್ರಮುಖಪಾತ್ರ.

ಇಲ್ಲಿರುವವರಲ್ಲಿ ಕೆಲವರಾದರೂ ಈ ನಾಟಕವನ್ನು ಓದದಿರಬಹುದು. ಆದ್ದರಿಂದ ನಾಟಕದ ಕಥೆಯನ್ನು ಸಂಗ್ರಹಿಸಿ ಹೇಳುವುದು ಅನುಚಿತವಾಗ ಲಾರದು. ಈ ನಾಟಕ ಮೂರು ರಂಗಗಳುಳ್ಳದ್ದು. ಕಥೆ ನೆರೆಹೊರೆಯವರಾದ ಎರಡು ಸಂಸಾರಗಳಿಗೆ ಸೇರಿದ್ದು. ಕಥೆಯೇನೂ ದೊಡ್ಡದಲ್ಲ. ರಂಗಣ್ಣ ತನ್ನ

ಎಂಜಲೆಲೆಯನ್ನು ತಂದು ಮನೆಯ ಹೊರಗಿನ ಮುನಿಸಿಪಲ್ ತೊಟ್ಟಿಗೆ ಹಾಕು ತ್ತಾನೆ. ಅದೇ ಸಮಯಕ್ಕೆ ಸರಿಯಾಗಿ ಪಕ್ಕದ ಮನೆ ಸುಬ್ಬಣ್ಣನ ಹೆಂಡತಿ ಪಾರ್ವತಮ್ಮ ಎಂಜಲೆಲೆಯೊಂದನ್ನು ತಂದು ಅದೇ ಮುನಿಸಿಪಲ್ ತೊಟ್ಟಿಗೆ ಹಾಕುತ್ತಾಳೆ. ಸುಬ್ಬಣ್ಣನೂ ಅದೇ ತೊಟ್ಟಿಯಲ್ಲೇ ಕೈ ತೊಳೆದುಕೊಂಡು ಪಕ್ಕದ ಮನೆಯ ರಂಗಣ್ಣನನ್ನು ಮಾತನಾಡಿಸಲು ರಂಗಣ್ಣನ ಮನೆಗೆ ಬರು ತ್ತಾನೆ. ಹೆಂಡತಿ ಹೇಗಿರಬೇಕು ಎಂಬುದನ್ನು define ಮಾಡಿ, ಹೆಂಡತೀನ ಹತೋಟಿಲಿ ಇಟ್ಕೊಳ್ಳೋದು ಹೇಗೆ ಅನ್ನೋದನ್ನ ಹೇಳುತ್ತಾನೆ. ರಂಗಣ್ಣ ತನ್ನ ಹೆಂಡತಿಗೆ ಅಧೀನವಾಗಿರೋದನ್ನ ಒಪ್ಪಿಕೊಳ್ತಾನೆ. ಸುಬ್ಬಣ್ಣ ರಂಗಣ್ಣನ್ನ ಬೆಳದಿಂಗಳಲ್ಲಿ ಹಾಗೇ ತಿರುಗಾಡಲು ಕರೆದುಕೊಂಡು ಹೋಗ್ತಾನೆ. ಮನೆಯ ಒಳಗಿಂದಲೇ ಇವರ ಮಾತುಕತೆಗಳ್ನ ಕೇಳಿಕೊಳ್ಳುತ್ತಿದ್ದ ಸಾವಿತ್ರಮ್ಮ ಸೀತಮ್ಮ ಬರುತ್ತಾರೆ. ಸೀತಮ್ಮನ ತಾಯಿ ಸಾವಿತ್ರಮ್ಮ ವಿಠಂತು. ಸೀತಮ್ಮ ರಂಗಣ್ಣನ ಧರ್ಮಪತ್ನಿ. ಸೀತಮ್ಮನಿಗೆ, ಗಂಡನ್ನ ಕಂಡರೆ, ಮರ್ಯಾದೆ ಇಲ್ಲ, ಗೌರವವಿಲ್ಲ. 'ಹೋಗುತ್ತೆ, ಬರುತ್ತೆ,' ಅಂತ ಹೀಗೇ ಮಾತಾಡುತ್ತಾಳೆ. ಸೀತಮ್ಮನ್ನ ಹೆತ್ತ ತಾಯಿ ಸಾವಿತ್ರಮ್ಮನೇ ಅವಳಿಗೆ ಆ ಗೈಯಾಳಿತನ ಬೋಧಿ ಸಿರೋದು. ತನ್ನ ಗಂಡ ಮತ್ತೊಬ್ಬನೊಡನೆ ತಮ್ಮ ಮಾತಾಡುತ್ತಿದ್ದದ್ದು, ಅದೇ ರೀತಿ ತಮ್ಮನ್ನ ಮನೆ ಬಿಟ್ಟು ದೂಡಬೇಕು ಎಂದು ಯೋಚಿಸು ತ್ತಿದ್ದುದು, ಎಲ್ಲಾ ಕೇಳಿ ದಿಗ್ಭ್ರಾಂತರಾಗ್ತಾರೆ. ಆಗ ಸಾವಿತ್ರಮ್ಮ ಉಪಾಯ ಹೂಡ್ತಾಳೆ. ಪಕ್ಕದ್ಮನೇ ಗಂಡಸು ಹೇಗೆ ತಮ್ಮ ಮನೇದಕ್ಕೆ ಉಪದೇಶ ಮಾಡಿತೋ ಅದೇ ರೀತಿ ಪಕ್ಕದ್ಮನೇ ಹೆಣ್ಣುಗಳಿಗೂ ತಾವು ಉಪದೇಶ ಮಾಡಿ, ಗಂಡನ್ನ ತಮ್ಮ ವಶಕ್ಕೆ ಇಟ್ಟುಕೊಳ್ಳೋಕೆ ಹೇಳೋದು. ಮಾರನೇ ದಿನ ಎರಡು ಗಂಡುಗಳೂ ಆಫೀಸಿಗೆ ಹೋದ ಕಾಲಕ್ಕೆ ಪಕ್ಕದ್ಮನೇವರಾದ ಲಕ್ಷ್ಮೀ ದೇವಮ್ಮ ಅವಳ ಮಗಳು ಪಾರ್ವತಮ್ಮನಿಗೂ ಬೋಧಿಸಿ ನೋಡುತಾರೆ. ಆದರೆ ಇಬ್ಬರೂ ಬಗ್ಗೋದಿಲ್ಲ.

ಸುಬ್ಬಣ್ಣನ ಬೋಧೆ ಸಫಲವಾಗುತ್ತದೆ. ಮಾರನೆಯ ದಿನ ಮನೆಯ ಮುಂದೆ ಜಟಕಾ ಗಾಡಿ ಬಂದು ನಿಲ್ಲುತ್ತದೆ. ರಂಗಣ್ಣ, ಹೆಂಡತಿ ಸೀತಮ್ಮ ಅತ್ತೆ ಸಾವಿತ್ರಮ್ಮ ಇಬ್ಬರಿಗೂ ತವರಿಗೆ ಹೊರಡೋಕೆ ಆಜ್ಞೆ ಮಾಡ್ತಾನೆ. ಸೀತಮ್ಮ ಸಾವಿತ್ರಮ್ಮ ಪಕ್ಕದ್ಮನೇ ಯಜಮಾನರಾದ ಸುಬ್ಬಣ್ಣನವರ ಮರೆ ಹೊಕ್ಕು,

ಯಜಮಾನರು ಹೇಳಿದ ಹಾಗೆ ಕೇಳ್ತೀವಿ ಎನ್ನುತ್ತಾರೆ. ಸುಬ್ಬಣ್ಣ ಒಪ್ಪಿ, ರಂಗಣ್ಣನ ಕಾಲಿಗೆ ನಮಸ್ಕಾರ ಮಾಡುವುದಕ್ಕೆ ಸೀತಮ್ಮನಿಗೆ ಹೇಳ್ತಾನೆ. ಸೀತಮ್ಮ ಇಷ್ಟವಿಲ್ಲದೆ ಇದ್ದರೂ ಕಾಲಿಗೆ ನಮಸ್ಕಾರ ಮಾಡ್ತಾಳೆ. ರಂಗಣ್ಣ ಕ್ಷಮಿಸುತ್ತಾನೆ. ಈ ರಾದ್ಧಾಂತವಾದ ಮೇಲೆ ಸುಬ್ಬಣ್ಣ ತನ್ನ ಮನೇ ಬಾಗಿಲು ತಳ್ಳಿ, ಬಾಗಿಲು ತೆಗೆಯೋಕೆ ಹೇಳ್ತಾನೆ. ಆದರೆ ಘಾಟಿಗಳಾದ ಪಾರ್ವತಮ್ಮ ಲಕ್ಷ್ಮೀದೇವಮ್ಮ ಬಾಗಿಲು ತೆಗೆಯುವುದಿಲ್ಲ. ಊರ ಮುಂದಲ ದೇವಸ್ಥಾನದ ಹತ್ತಿರ ಬಿದ್ದಿರೋ ಸಗಣೀನ ತರೋಕೆ ಹೇಳಿ ಕಳುಹಿಸುತ್ತಾರೆ. ಈ ರಾದ್ಧಾಂತ ಪಕ್ಕದ್ಮನೇ ರಂಗಣ್ಣನಿಗೂ ಕೇಳಿಸುತ್ತೆ. ಅವನು ಬಂದು ನೋಡಿ ಕಕ್ಕಾವಿಕ್ಕಿ ಯಾಗುತ್ತಾನೆ, ಎಲ್ಲಾ ಇದ್ದಕ್ಕಿದ್ದ ಹಾಗೆ ತಲೆಕೆಳಗಾಯಿತಲ್ಲಾ ಅಂತ. ತನ್ನ ಮನೆಯಲ್ಲೇ ಊಟ ಮಾಡಿಸುತ್ತಾನೆ. ಕಡೆಗೆ ಸುಬ್ಬಣ್ಣ ತನ್ನ ಮನೆಯಲ್ಲೂ ಅದೇ ರೀತಿ ನಡೆಯುತ್ತದೆಂಬುದನ್ನು ತಿಳಿಸುತ್ತಾನೆ. ತನ್ನ ಹೆಂಡತಿ ಪಾರ್ವತಮ್ಮ ಎನೆವ ಎಲೆ ಅವಳು ಊಟ ಮಾಡಿದ್ದು, ತಾನು ಕೈ ತೊಳಕೊಂಡದ್ದು ಗೋಮಯ ಹಚ್ಚಿದ ಮೇಲೆ—ಎಂಬುದಾಗಿ ಇಲ್ಲಿಗೆ ನಾಟಕ ಮುಗಿಯುತ್ತದೆ.

ನಾಟಕ ಓದಿ ಮುಗಿಸಿದ ಮೇಲೆ ಗಟ್ಟಿಯಾಗಿ ಒಂದು ಸಲ ನಗೋಣ ಎನ್ನಿಸುತ್ತದೆ ಅಷ್ಟೆ. ನಾಟಕದ ಆಳ ಬೇಗ ತಿಳಿಯುವುದಿಲ್ಲ. ಬರಿಯ ಹಾಸ್ಯ ಕ್ಕಾಗಿ ಬರೆದ ಒಂದು ಪ್ರಹಸನ ಎಂಬುದಾಗಿ ತೋರುತ್ತದೆ. ಆದರೆ ನಿಜ ವಾಗಿಯೂ ಹಾಗಲ್ಲ. ಇದು ಒಂದು ಸಾಮಾಜಿಕ ನಾಟಕ. ಒಟ್ಟು ಪಾತ್ರ ಆರು: ನಾಲ್ಕು ಜನ ಹೆಂಗಸರು, ಇಬ್ಬರು ಗಂಡಸರು. ಹೆಂಗಸರದೇ ಮೇಲುಗೈ. ಇಬ್ಬರು ಗಂಡಸರೂ Hen-pecked husbandಗಳು. ಆದರೆ ಇಬ್ಬರೂ ಒಂದೇ ಥರವಲ್ಲ. ಸುಬ್ಬಣ್ಣ Hen-pecked ಆದರೂ ನೆರಹೊರ್ಕೆ ಏನೆಂಬು ದನ್ನು ಅರಿತವ. ರಂಗಣ್ಣನಿಗೆ ಅದು ಗೊತ್ತಿಲ್ಲ. ಲಕ್ಷ್ಮೀದೇವಮ್ಮ, ಪಾರ್ವ ತಮ್ಮ, ತಮ್ಮ ಆಳ್ವಿಕೆಯನ್ನು ಹತ್ತಾರು ಜನರಿಗೆ ತೋರಿಸಿಕೊಳ್ಳುವುದಿಲ್ಲ. ಸಾವಿತ್ರಮ್ಮ, ಸೀತಮ್ಮ ತಮ್ಮ ಆಳ್ವಿಕೆಯನ್ನು ಬಹಿರಂಗವಾಗಿಯೇ ನಡಸುತ್ತಾರೆ.

ಸಾಮಾಜಿಕ ನಾಟಕಗಳನ್ನು ಎರಡು ವಿಧವಾಗಿ ವಿಂಗಡಿಸಬಹುದು: ಒಂದನೆಯದು, ಸಮಾಜದ ಒಬ್ಬ ವ್ಯಕ್ತಿಯನ್ನು ಸಹೃದಯರಿಗೆ ಎತ್ತಿ ತೋರಿ ಸುವುದು. ಈ ತರಹದ ನಾಟಕಗಳಲ್ಲಿ ನಾಟಕಕರ್ತ, ನೀತಿಯೊಂದನ್ನು ತಿಳಿಸುತ್ತಾನೆ. ನಾಯಕ ನಿಜವಾಗಿಯೂ ಒಳ್ಳೆಯವನೆ ಅಥವಾ ಕೆಟ್ಟವನೆ

ಎಂಬುದನ್ನು ತೋರಿಸುತ್ತಾನೆ. 'ಮಕ್ಕಳಿಸ್ಕೂಲ್ ಮನೇಲಲ್ವೇ' ಎಂಬುದು ಈ ತೆರನ ನಾಟಕ. ಇದರಲ್ಲಿ ಸಮಾಜದ ಸಮಸ್ಯೆಯೊಂದಿಲ್ಲ. ಇದು ವ್ಯಕ್ತಿ ವಿಮರ್ಶೆ-ತಾರತಮ್ಯ ಪರೀಕ್ಷೆ. ಆದರೆ 'ವೈದ್ಯನ ವ್ಯಾಧಿ' ಸಮಾಜದ ಸಮಸ್ಯೆಯೊಂದನ್ನು ಓದುಗರ, ನೋಡುವವರ ಮುಂದೆ ಇಡುತ್ತದೆ. ಇದರಲ್ಲಿ ಪಾತ್ರಕ್ಕೆ ಪ್ರಾಮುಖ್ಯತೆ ಇಲ್ಲ. ಯಾವ ಪಾತ್ರವನ್ನೂ ತೆಗಳುವುದಕ್ಕೆ ಆಗುವುದಿಲ್ಲ, ಯಾವ ಪಾತ್ರವನ್ನೂ ಹೊಗಳುವುದಕ್ಕಾಗುವುದಿಲ್ಲ. ಸುಬ್ಬಣ್ಣನ ಗುಣವನ್ನು ಹೊಗಳಬಹುದು. ಆದರೆ ಬರುವ ಆ ನಾಲ್ಕು ಹೆಂಗಸರಲ್ಲಿ ಯಾರು ಮೇಲು? ಯಾರು ಕೀಳು? ಯಾರದು ತಪ್ಪು? ಯಾರದು ತಪ್ಪಿಲ್ಲ? ಈ ರೀತಿ ವ್ಯಕ್ತಿ ವಿಮರ್ಶೆಗೆ ಈ ನಾಟಕ ಯೋಗ್ಯವಲ್ಲ. ಇದರಲ್ಲಿ ನೋಡಬೇಕಾದುದು ಮತ್ತೊಂದು ಅಂಶವಿದೆ. ಅದು ಸಮಾಜದಲ್ಲಿನ ಒಂದು ಸಮಸ್ಯೆ.

ಮದುವೆಯಾದ ಮೇಲೆ, ಹೆಣ್ಣಿಗೂ ಗಂಡಿಗೂ ಯಾವ ವಿಧವಾದ ಸಂಬಂಧವಿರಬೇಕು ಎಂಬುದೇ ಆ ಸಮಸ್ಯೆ ಹೆಣ್ಣು ಗಂಡನ್ನು ಆಳಬೇಕೆ, ಗಂಡು ಹೆಣ್ಣನ್ನು ಆಳಬೇಕೆ, ಅಥವಾ ಒಬ್ಬರನ್ನೊಬ್ಬರು ಆಳಬೇಕೆ, ಅಥವಾ ಒಬ್ಬರೂ ಇನ್ನೊಬ್ಬರನ್ನು ಆಳದೆ ಇರುವುದೆ?

ಗಂಡು ಹೆಣ್ಣನ್ನು ಆಳಬೇಕು ಎಂದು ಇಲ್ಲಿರುವವರೆಲ್ಲ ಘಂಟಾಘೋಷವಾಗಿ ಹೇಳುತ್ತೀರಿ. ಏಕೆ ಎಂದು ನಾನು ಕೇಳಿದರೆ, ಉತ್ತರ ಕೊಡುತ್ತೀರಾ ನೀವು? ಉತ್ತರಿಸುವುದು ಕಷ್ಟ. ಪ್ರಪಂಚದ ಹೋರಾಟದಲ್ಲಿ ಗಂಡಸಿನ ದೊಡ್ಡ ಗೆಲವೆಂದರೆ ಹೆಂಗಸಿನ ಮೇಲೆ. ಯಾವ ರೀತಿಯಲ್ಲೋ ಏನೋ ಗಂಡಸು ಹೆಂಗಸನ್ನು ತನ್ನ ಅಧೀನಮಾಡಿಕೊಂಡಿದ್ದಾನೆ. ಹೆಂಗಸು ತನ್ನ ಹುಟ್ಟಿನ ಮೊದಲಿನಿಂದಲೂ ಅದನ್ನು ಎದುರಿಸುತ್ತಲೇ ಇದ್ದಾಳೆ. ಅವಳನ್ನು ತನ್ನ ಪೂರ್ಣ ಹತೋಟಿಗೆ ತೆಗೆದುಕೊಳ್ಳಲು ಅವಳ ಮೇಲೆ ಕಟ್ಟುಗಳನ್ನು ಹಾಕುತ್ತಲೇ ಇದ್ದಾನೆ ಈ ಮಾನವ. ಅಂತಹ ಕಟ್ಟುಗಳಲ್ಲಿ ಮನುಧರ್ಮ ಶಾಸ್ತ್ರವೊಂದು. ದಯವಿಟ್ಟು ಕ್ಷಮಿಸಬೇಕು. ನನ್ನ ಅಭಿಪ್ರಾಯದಲ್ಲಿ ಮನು ಧರ್ಮಶಾಸ್ತ್ರಕಾರ ಸ್ವಲ್ಪ ಸಂಕುಚಿತ ಹೃದಯವುಳ್ಳವನು. ಆತ ತನ್ನವರಿಗೆ, ತನ್ನ ಮತದವರಿಗೆ ಮಾತ್ರ ಅನುಕೂಲ ಮಾಡಿಕೊಂಡಿದ್ದಾನೆ. ಅವನ ಪ್ರಕಾರ ಹೆಂಗಸು ತನ್ನ ಜೀವಮಾನವನ್ನೆಲ್ಲ ಮತ್ತೊಬ್ಬರ ಅಧೀನದಲ್ಲೇ ಕಳೆಯಬೇಕಂತೆ. ಬಾಲ್ಯವನ್ನು ತಂದೆಯ ಅಧೀನದಲ್ಲೂ ಯೌವನವನ್ನು ಗಂಡನ ಅಧೀನದಲ್ಲೂ

ವೃದ್ಧಾಪ್ಯವನ್ನು ಮಕ್ಕಳ ಅಧೀನದಲ್ಲೂ ಕಳೆದು, ಕಡೆಗೆ ಯಮುನ ಅಧೀನ ವಾಗುವುದು. ಇದು ಅವನ ಪ್ರಕಾರ ಹೆಂಗಸಿನ ಬಾಳು. ನಿಜವಾಗಿಯೂ ಹೆಂಗಸನ್ನು ಗಂಡಸು ಅದೇ ರೀತಿಯಲ್ಲಿ ಆಳುತ್ತ ಬಂದಿದ್ದಾನೆ. ಎಲ್ಲೋ ಅಲ್ಲಿ ಇಲ್ಲಿ ಸ್ವಲ್ಪ ವ್ಯತ್ಯಾಸ ಇರಬಹುದು. ಹೆಂಗಸಿನ ಬಾಳು ಎಂದರೆ ಗಾಂಧಾರಿ, ಕುಂತಿಯರ ನೆನಪೇ ಬರುತ್ತದೆ. ಅವರ ಬಾಳು ಎಷ್ಟು ಕಠಿಣವಾಗಿತ್ತು! ಹಾಗೆಯೇ ಶ್ರೀಮತಿ Pearl S. Buckರವರ 'Good earth'ಇನ 'ಓ-ಲಾನ್' ಬಾಳೂ ಅಂಥದೇ. ಹೆಂಗಸನ್ನು ಈ ರೀತಿ ತಮ್ಮ ಆಳಿಕೆಯಲ್ಲಿ ಇಟ್ಟುಕೊಳ್ಳುವುದನ್ನು ಒಪ್ಪುತ್ತೀರಾ? ಒಪ್ಪುವುದಾದರೆ Julius Caesar ನಾಟಕದಲ್ಲಿ ಬ್ರೂಟಸ್ ಹೆಂಡತಿ ಪೋರ್ಷಿಯಾ ಆ ವಿಷಯದಲ್ಲಿ ಹೇಳುವುದನ್ನು ಓದಿ. ಆಗ ನಿಮ್ಮ ತಪ್ಪು ತಿಳಿಯುತ್ತದೆ.

ಗಂಡು ಹೆಣ್ಣನ್ನು ಆಳಬಹುದಾದರೆ, ಹೆಣ್ಣು ಗಂಡನ್ನು ಏಕೆ ಆಳ ಬಾರದು? ಹೆಣ್ಣಿಗೆ ಅಧೀನನಾದ ಗಂಡಸನ್ನು ಏಕೆ ಹಾಸ್ಯ ಮಾಡಬೇಕು? ಸಂಸಾರ ಸುಖವಾಗಿ ನಡೆದರೆ ಸಾಕು. ಯಾರು ಯಾರನ್ನು ಆಳಿದರೆ ತಾನೇ ಏನು? ಗಂಡನನ್ನೇ ನಂಬಿದ ಹೆಂಡತಿ ಗಂಡ ತನ್ನನ್ನು ಆಳುತ್ತಿದ್ದಾನೆ ಎಂಬು ದನ್ನೇ ಅರಿಯಳು. ಆ ಭಾವನೆಯೇ ಬರದು. ಅದೇ ರೀತಿಯಲ್ಲಿ ಹೆಂಡತಿ ತನ್ನನ್ನು ಆಳುತ್ತಿದ್ದಾಳೆ ಎಂಬುದನ್ನೇ ಅರಿಯದೆ ಸಂಸಾರದಲ್ಲಿ ಸುಖವಾಗಿದ್ದ ರಂಗಣ್ಣನಲ್ಲಿ ತಪ್ಪೇನಿದೆ? ಸಂಸಾರ ಸುಗಮವಾಗಿ ನಡೆದೇ ಹೋಗುತ್ತದೆ. ಇಲ್ಲಿ ನನಗೆ ಶ್ರೀ ರಾಜರತ್ನಂರವರ 'ನಾಗನ ಪದಗಳು' ಪುಸ್ತಕದ ಒಂದು ಪದ್ಯ ನೆನಪಿಗೆ ಬರುತ್ತದೆ. ಅಲ್ಲಿ ಬರುವ ಮಲ್ಲಿಯ ಗಂಡನೂ ಇದೇ ತತ್ತ್ವವನ್ನೇ ಹೇಳುತ್ತಾನೆ. ಈ ದೃಷ್ಟಿಯಲ್ಲಿ ನೋಡಿದರೆ ಸುಬ್ಬಣ್ಣನ ವ್ಯಕ್ತಿತ್ವವೇ ಬೇರೆ ತೆರನಾಗುತ್ತದೆ. ರಂಗಣ್ಣನೇ ವಾಸಿ ಎನ್ನಿಸುತ್ತದೆ.

ಈ ನಾಟಕದಲ್ಲಿ ಮತ್ತೊಂದು ತೋರಿಬರುತ್ತೆ. ಗಂಡನಾದ ರಂಗಣ್ಣನನ್ನು 'ಬರುತ್ತೆ, ಹೋಗುತ್ತೆ' ಎಂದು ಕರೆಯುವ ಸೀತಮ್ಮನಿಗೂ ರಂಗಣ್ಣನಿಗೂ ಯಾವ ವಿಧವಾದ ಸಂಸಾರ ಸಾಮರಸ್ಯವಿದ್ದೀತು? ಸಾಮರಸ್ಯವೇ ಗುರಿಯಾದ ದಾಂಪತ್ಯ ಈ ರೀತಿಯ ವಿರಸಕ್ಕೆ ಕಾರಣವಾದರೆ, ಆ ದಾಂಪತ್ಯದಿಂದ ತಾನೆ ಏನು ಪ್ರಯೋಜನ? ಈ ವಿಧವಾದ ದಾಂಪತ್ಯಗಳು ನಮ್ಮ ದೇಶದಲ್ಲಿ ಎಷ್ಟು ಇಲ್ಲ? ಗುರಿತಪ್ಪಿದ ಈ ದಾಂಪತ್ಯಕ್ಕೆ ಕಾರಣವೇನು? ಲಕ್ಷ್ಮೀದೇವಮ್ಮ,

ಸಾವಿತ್ರಮ್ಮ ಮುಂತಾದ ತಾಯಂದಿರೇ? ಗಂಡನನ್ನು ರಾತ್ರಿ ಸಗಣಿ ತರಲು ಹೇಳುವ ಹೆಂಡತಿಗೆ ತಾನೆ ಗಂಡನಲ್ಲಿ ಯಾವ ಪ್ರೇಮವಿದ್ದೀತು? ಇದನ್ನೆಲ್ಲ ಯೋಚನೆ ಮಾಡಿದರೆ, ದಾಂಪತ್ಯಪ್ರೇಮ ಎನ್ನುವುದು ಸಾಮಾನ್ಯ ಜನತೆಯಲ್ಲಿ ಬರಿಯ ಒಂದು ಭಾವನೆ ಮಾತ್ರ ಎನ್ನಿಸುತ್ತದೆ.

ನೋಡಿದಿರಾ, ವೈದ್ಯನ ವ್ಯಾಧಿಯನ್ನು ಪರೀಕ್ಷಿಸುವುದರಿಂದ ವ್ಯಾಧಿಯ ಬೆಳವಣಿಗೆ, ಅದರ ಚಿಹ್ನೆಗಳು ಹೇಗೆ ತೋರಿಬಂದವು? ವ್ಯಾಧಿ ಎಂಥದೆಂದು ಗೊತ್ತಾದರೆ, ವ್ಯಾಧಿಗೆ ತಕ್ಕ ಔಷಧವನ್ನು ಕಂಡುಹಿಡಿಯಲು ಪ್ರಯತ್ನ ಮಾಡಬಹುದು.

ಕಡೆಯದಾಗಿ ನಾಟಕಕರ್ತರಾದ ಕೈಲಾಸಂರವರ ವಿಷಯವಾಗಿ ಒಂದು ಮಾತು. ಕೈಲಾಸಂರವರು ಇಂಥ ಒಂದು ನಾಟಕವನ್ನು ಯಾವುದರಿಂದ ಸ್ಫೂರ್ತಿ ಪಡೆದು ಬರೆದರು? ಎಂದು ಆಲೋಚಿಸೋಣ. ಕಥೆ ಪ್ರಾರಂಭ ವಾಗುವುದು ಒಂದು ಮುನಿಸಿಪಲ್ ತೊಟ್ಟಿಯಿಂದ. ಕಸ ತುಂಬುವ ಮುನಿಸಿ ಪಲ್ ತೊಟ್ಟಿಯನ್ನು ನೋಡಿ, ಕೈಲಾಸಂ ಸಮಾಜದ ಕಸದ ಗೊಬ್ಬರ ವೊಂದನ್ನು ಎಲ್ಲರಿಗೂ ತೋರಿಸಿದ್ದಾರೆ. ಇಂತಹ ನಾಟಕಕಾರನ ಪ್ರತಿಭೆ ಸಾಮಾನ್ಯವಾದುದೇನಲ್ಲ.

**ಜಿ. ಎಸ್. ಶ್ರೀನಿವಾಸಮೂರ್ತಿ**

## ಗುರು ಮಹಿಮೆ

ಹೇಳಿದ್ದೆ ಹೇಳುವರು, ಕೇಳಿದ್ದೆ ಕೇಳುವರು,
ಕೇಳಿದ್ದೆ ಕೇಳಿ ಸುಖಿಸುವರು—ಗುರುಗಳಾ
ಹೇಳಿಕೆಯೆ ಬೇರೆ ಸರ್ವಜ್ಞ.

ಗುರುವಿಂಗೆ ದೈವಕ್ಕೆ ಹಿರಿದು ಅಂತರವುಂಟು,
ಗುರು ತೋರ್ಪ ದೈವದೆಡೆಯನ್ನು; ದೈವ ತಾ
ಗುರುವ ತೋರುವುದೆ ಸರ್ವಜ್ಞ?

# ಹರಳೆಲೆಯ ವಂಶಜರು

ಆದಿ ಮನುಷ್ಯನ ಬುದ್ಧಿ ವಿಕಾಸವಾದಂತೆಲ್ಲಾ ಅವನು ತನ್ನ ಶರೀರದ ರಕ್ಷಣೆಗೆ ಮಾರ್ಗಗಳನ್ನು ಹುಡುಕತೊಡಗಿದನು. ˙ ಮೊದಲಿಗೆ ಬಿಸಿಲಿನ ಝಳ ವನ್ನು ತಾಳಲಾರದೆ, ನೆರಳಿಗೋಸ್ಕರ ಹರಳು (?) ಗಿಡದ ಎಲೆಗಳನ್ನು ತನ್ನ ತಲೆಯ ಮೇಲೆ ಹಿಡಿದುಕೊಂಡು ಓಡಾಡಿರಬಹುದು. ಆದರೆ, ಯಾವಾಗಲೂ ಒಂದು ಕೈಯಿಂದ ಎಲೆಯನ್ನು ಹಿಡಿದುಕೊಂಡಿದ್ದರೆ ಕೆಲಸಕ್ಕೆ ಉಳಿಯುವುದು ಇನ್ನೊಂದೇ ಕೈಯಾದುದರಿಂದ, ಅವನು ಬಹಳ ಯೋಚಿಸಿ, ಹಿಡಿದು ಕೊಳ್ಳದೆಯೇ ತಲೆಗೆ ನೆಳಲನ್ನು ಕೊಡುವಂತಹ ವಸ್ತು ಒಂದನ್ನು ಸೃಜಿಸಿರ ಬೇಕು. ಅದೇ ಈಗಿನ ನಮ್ಮ ನಾನಾ ತರಹದ ಟೋಪಿಗಳ ಆದಿರೂಪ. ಮಲೆ ನಾಡಿನ ಕಡೆ ಹೊಲಗಳಲ್ಲಿ ಕೆಲಸ ಮಾಡುವ ಆಳುಗಳು ತಲೆಗೆ 'ಅಡಕೆ ಹಾಳೆ'ಯನ್ನು ಹಾಕಿಕೊಳ್ಳುತ್ತಾರೆ. ಇದು ಆ ಮೂಲಪುರುಷನ ಸಂಬಂಧಿ.

ಮೊದಲು ಬರಿಯ ರಕ್ಷಣೆಗಾಗಿ ಉಪಯೋಗಿಸುತ್ತಿದ್ದ ಆ ವಸ್ತು, ಮನುಷ್ಯನು ಕ್ರಮೇಣ ನಾಗರಿಕನಾಗಿ ಉಡುಪನ್ನು ಉತ್ತಮಗೊಳಿಸುತ್ತಾ ಹೋದಂತೆ, ಅಲಂಕಾರದ ಉಪಕರಣವಾಗಿ ಪರಿಣಮಿಸಿತು. ಮನುಷ್ಯ ನೂಲುವುದನ್ನೂ ನೇಯುವುದನ್ನೂ ಕಲಿತನು. ಆದಿವಾನರರಿಂದ ನರ ಮತ್ತು ವಾನರ ಎಂಬ ಎರಡು ಕವಲು ಹೊರಟಂತೆ, 'ಹರಳೆಲೆ'ಯ ವಂಶಜರಲ್ಲಿ ಎರಡು ಕವಲುಗಳಾದವು. ಬಟ್ಟೆಯೂ ಸಮಯವೂ ಜಾಸ್ತಿ ಇದ್ದವರು ಬಟ್ಟೆ ಯನ್ನು ತಲೆಯ ಸುತ್ತಲೂ ಸಿಂಬಿ ಸುತ್ತಿ ಸುತ್ತಿ ತಮ್ಮ ತಲೆಯನ್ನು ರಕ್ಷಿಸಿ ಕೊಂಡರು. ಈ ಕವಲಿನ ವಿಚಾರದಲ್ಲಿ ಶ್ರೀ ವಿ. ಸೀ. ಅವರಾಗಲೇ ಬರೆ ದಿದ್ದಾರೆ. ಅದನ್ನು ಬಿಟ್ಟು, ಅದರ ದಾಯಾದಿಯಾದ ಅಡಕೆಯ ಹಾಳೆಯ ಮಕ್ಕಳು ಮೊಮ್ಮಕ್ಕಳನ್ನು ನೋಡೋಣ.

ಏಷ್ಯಾ ಮೈನರ್‌ನ ಆದಿವಾಸಿಗಳಲ್ಲಿ ಒಂದು ತಂಡ ಯೂರೋಪಿನ ಕಡೆಗೂ ಮತ್ತೊಂದು ತಂಡ ನಮ್ಮ ದೇಶಕ್ಕೂ ಬಂದವು. ಈ ಎರಡು ವಿಭಾಗ ಗಳ ಸಂಸ್ಕೃತಿ ಮತ್ತು ಸನ್ನಿವೇಶಗಳನ್ನನುಸರಿಸಿ ಅವರ ಟೋಪಿಗಳೂ ಬದಲಾ ವಣೆ ಹೊಂದಿದವು.

ಯೂರೋಪಿನಲ್ಲಿ ಫ್ರೆಂಚರಿಂದಲೋ ಸ್ಪೆಯಿನಿನವರಿಂದಲೋ ಕಂಡು

ಹಿಡಿಯಲ್ಪಟ್ಟ ತ್ರಿಕೋಣಾಕಾರವಾದ ಟೋಪಿ ಮಧ್ಯಯುಗದ ಕೆಲವು ಶತಮಾನಗಳಲ್ಲಿ, ಹತ್ತೊಂಭತ್ತನೆಯ ಶತಮಾನದ ವರೆಗೂ, ಬಹಳ ಚೇತೋಹಾರಿಯಾಗಿದ್ದಂತೆ ಕಂಡುಬರುತ್ತದೆ. ಆದರೆ ಅದು ಆಗಿನ ಸಮಾಜದ ಒಂದು ವರ್ಗಕ್ಕೆ ಮಾತ್ರ ಅನುಕೂಲವಾಗಿದ್ದಿತು. ನಾಲ್ಕು ಕಡೆ ತಿರುಗಿ, ಮೈಮುರಿಯುವಂತೆ ಕೆಲಸ ಮಾಡುವವನಿಗೆ ಅದರಿಂದ ಅನುಕೂಲಕ್ಕಿಂತ ಪ್ರತಿಕೂಲವೇ ಹೆಚ್ಚಾಗಿದ್ದಿತು. ಆದುದರಿಂದ, ಗಾಳಿಗೆ ಹಾರಿಹೋಗದಂತೆ, ಬಗ್ಗಿದಾಗ ಬೀಳದಂತೆ, ನಿಲ್ಲಲು ಕೆನ್ನೆಯ ಮೇಲೆ ಹಾದುಹೋಗುವ ಪಟ್ಟಿಯುಳ್ಳ ಬೆಂಡಿನ ಟೋಪಿ (pith hat) ಗಳು ಆಗ ಕಂಡುಹಿಡಿಯಲ್ಪಟ್ಟಿರಬೇಕು.

ಮುಸಲ್ಮಾನ ಸಂಸ್ಕೃತಿಯ ಟೋಪಿಗಳು ಯಾವರೀತಿ ಹುಟ್ಟಿದವೆಂಬುದು ತಿಳಿಯಬರುವಂತಿಲ್ಲ. "ಫೆಜ್" (Fez) ಯಾವ ರೀತಿ ಹುಟ್ಟಿತು? ಅದಕ್ಕೆ ಕುಚ್ಚು ಬರಲು ಕಾರಣವೇನು? ಎಷ್ಟು ಯೋಚಿಸಿದರೂ ಬಗೆಹರಿಯದ ವಿಷಯ. ಇದರ ಜೊತೆಗೆ ಕಪ್ಪಗೆ, ದುಂಡಾಗಿ, ಬೋರಲು ಹಾಕಿದ ಬಟ್ಟಲಿನಂತೆ, ಮಿರುಗುವ ಫಾರಸೀ ಟೋಪಿಯನ್ನೂ ಸೇರಿಸಬಹುದೇನೋ!

ನಮ್ಮ ದೇಶದ ಟೋಪಿಗಳಲ್ಲಿ ಗಮನಾರ್ಹವಾದ ಬದಲಾವಣೆಗಳೇನೂ ಆಗಿಲ್ಲ. ರುಮಾಲಿನಲ್ಲಿ ಅನಂತವಾದ ರೀತಿಗಳು ಹುಟ್ಟಿಕೊಂಡರು ಕೂಡ, ಟೋಪಿ ಮಾತ್ರ ತನ್ನ ಅನುವಂಶಿಕವಾದ ರೂಪನ್ನು ಸಾಧ್ಯವಾದಮಟ್ಟಿಗೆ ಉಳಿಸಿಕೊಂಡೇ ಬಂದಿದೆ.

ನಾವು ಚಿಕ್ಕಂದಿನಲ್ಲಿ ಶಾಲೆಗೆ ಹೋಗುತ್ತಿದ್ದಾಗ ನಮಗೆ ಒಂದು ತರಹ ಕಸೂತಿಯ ದುಂಡು ಟೋಪಿಯನ್ನು ಹಾಕುತ್ತಿದ್ದರು. ಅದನ್ನು ನಾನು ಯಾವಾಗಲೂ ಮರೆಯಲು ಸಾಧ್ಯವಿಲ್ಲ. ಅದರಷ್ಟು ಸರಳವಾದುದು ಮತ್ತಾವುದೂ ಇಲ್ಲ. ತಲೆಯ ಆಕಾರ ಅಳತೆಗಳಿಗೆ ಸರಿಯಾಗಿ, ಸ್ವಲ್ಪವೂ ಹೆಚ್ಚಾಗದೆ ತಲೆಗೆ ಹತ್ತಿಕೊಂಡಿರುತ್ತಿದ್ದ ಆ ಟೋಪಿಯ ಮಿತವ್ಯಯವೆಷ್ಟು? ಆಗ ನಮಗೆ ಆ ಟೋಪಿಯೇ ಸರ್ವಸ್ವ. ಅದೇ ನಮಗೆ ಫ್ಯಾಷನ್ನಿನ ಅತ್ಯುನ್ನತ ಶೃಂಗ. ಶುಕ್ರವಾರ ಶಾರದಾಪೂಜೆ ಮಾಡಿ, ಶಾಲೆಯಲ್ಲಿ ಕೊಟ್ಟ ಕಡಲೆಪುರಿಯನ್ನು ಆ ಟೋಪಿಯಲ್ಲಿ ಹಾಕಿಕೊಂಡು ತಿಂದಾಗ ಉಂಟಾಗುತ್ತಿದ್ದ ಆನಂದ ನನಗೆ ಮತ್ತಾವುದರಿಂದಲೂ ಲಭಿಸಿಲ್ಲ.

ನಮ್ಮ ಟೋಪಿಗೂ ಪಾಶ್ಚಾತ್ಯರ ಟೋಪಿಗೂ ಬಳಕೆಯಲ್ಲಿ ಒಂದು

ಮುಖ್ಯ ವ್ಯತ್ಯಾಸ ಕಂಡುಬರುತ್ತದೆ. ಅವರು ಮೇಲಧಿಕಾರಿಗಳಿಗೆ ಗೌರವ ತೋರಿಸಬೇಕಾದರೆ, ತಮ್ಮ ಟೋಪಿಯನ್ನು ತೆಗೆಯುತ್ತಾರೆ. ಆದರೆ ನಾವು ತತ್‌ಕ್ಷಣ ಹಾಕಿಕೊಳ್ಳುತ್ತೇನೆ. ಇವೆರಡರಲ್ಲಿ ನಮ್ಮದೇ ವಾಸಿ ಎಂದು ಕಾಣು ತ್ತದೆ. ಏಕೆಂದರೆ, ನಮ್ಮ ಹಿರಿಯರ ಕೋಪದ ದೃಷ್ಟಿಯು ತಾಖ ನಮ್ಮ ಬುರುಡೆಗೆ ತಟ್ಟದಂತೆ ಟೋಪಿ ಸಂರಕ್ಷಿಸುತ್ತದೆಯೋ ಏನೋ! ಎಷ್ಟೇ ಆಗಲಿ, ನಮ್ಮವರು ಬುದ್ಧಿವಂತರು!

K. G. F (ಚಿನ್ನದ ಗಣಿ) ಅಲ್ಲಿ ಒಂದು ತರಹ ಟೋಪಿಯನ್ನು ಉಪ ಯೋಗಿಸುತ್ತಾರೆ. ಅದನ್ನು 'ಟೋಪಿ' ಎನ್ನುವುದಕ್ಕಿಂತ 'ಕುಕ್ಕೆ' ಎಂದರೆ ಅನ್ವರ್ಥನಾಮವಾಗುತ್ತದೆ. ಗಣಿಯಲ್ಲಿ ಕೆಲಸಮಾಡುವಾಗ ತಲೆಯ ಮೇಲೆ ಕಲ್ಲು ಬಿದ್ದು, ತಮ್ಮ ಸಂಸಾರದ ಬಾಯಿಗೆ ಮಣ್ಣು ಬೀಳದಿರಲೆಂದು ಅದನ್ನು ಹಾಕಿಕೊಳ್ಳುತ್ತಾರೆ.

ಇನ್ನೂ ನಾನಾ ತರಹ ಟೋಪಿಗಳಿವೆಯಾದರೂ ಆಧುನಿಕ ಪಾಶ್ಚಾತ್ಯ ಮಹಿಳೆಯರ ಟೋಪಿಗಳನ್ನು ವರ್ಣಿಸಲು ಆದಿಶೇಷನ ಸಹಸ್ರಜಿಹ್ವೆಗಳಿಗೂ ಸಾಧ್ಯವಿಲ್ಲದ ಮಾತು. ಅವರು ಟೋಪಿಯ ಅಲಂಕಾರಕ್ಕಾಗಿ ಕೈಗೆ ಸಿಕ್ಕಿದ್ದ ನ್ನೆಲ್ಲಾ ಉಪಯೋಗಿಸುತ್ತಾರೆ. ಹಣ್ಣು, ಸತ್ತ ಹಕ್ಕಿ, ಬ್ರೆಡ್, ಕೇಕ್, ಪಕೋಡ, ಇನ್ನೂ ಏನೇನಿವೆಯೋ ಅವೆಲ್ಲವೂ ಅವರ ಟೋಪಿಗಳಲ್ಲಿರುತ್ತವೆ. ಅವುಗಳನ್ನು ಚಲಿಸುವ ವಸ್ತುಸಂಗ್ರಹಾಲಯಗಳೆಂದರೂ ಅತಿಶಯೋಕ್ತಿಯಾಗ ಲಾರದು. ಕೆಲವಂತೂ ಭಯೋತ್ಪಾದಕವಾಗಿವೆ (Nightmarish).

ಇನ್ನು ಟೋಪಿಗಳನ್ನು ಧರಿಸುವ ವಿಧಾನವನ್ನು ನೋಡಿದರೆ— ಒಬ್ಬೊಬ್ಬರದು ಒಂದೊಂದು ವೈಶಿಷ್ಟ್ಯ. K. M. ಮುನ್ಷಿಯವರ ಟೋಪಿ ಎರಡು ಕೊನೆಯಲ್ಲಿಯೂ ಚೂಪಗೆ ಕತ್ತಿಯ ಅಲಗಿನಂತಿದ್ದರೆ, ಇನ್ನು ಕೆಲವರದು ಎಲ್ಲಾ ಹಿಸುಕಿ ಹಿಪ್ಪೆಕಾಯಿಯಾಗಿರುತ್ತದೆ. ಕೆಲವರು ಓರೆಯಾಗಿ ಇಡುತ್ತಾರೆ. ಅವರವರ ಸೊಗಸುಗಾರತನ ಅವರವರು ಟೋಪಿ ಇಡುವ ಕೋನದ ಪ್ರಕಾರ ಇರುತ್ತೆ. ಶ್ರೀ ರಾಜೇಂದ್ರಪ್ರಸಾದರಂತಹ ಸರಳಜೀವಿಗಳು ಅದಕ್ಕೆಲ್ಲಾ ಮನಸ್ಸೇ ಕೊಡುವುದಿಲ್ಲ. ಸುಮ್ಮನೆ ಟೋಪಿಯನ್ನೆತ್ತಿ ತಲೆಯ ಮೇಲೆ ಎಸೆದುಬಿಟ್ಟರಾಯಿತು. ಉದ್ದುದ್ದವಾಗಿಯೆ ಇರಲಿ, ಅಡ್ಡಡ್ಡವಾಗಿಯೆ ಇರಲಿ, ಅವರಿಗೆ ಅದರ ಪರಿವೆಯೇ ಇರುವುದಿಲ್ಲ. ಇವರಿಗೆ ವ್ಯತಿರಿಕ್ತವಾದವರೂ

ಇದ್ದಾರೆ. ಅವರ ಟೋಪಿ ಎಷ್ಟು ಓರೆಯಾಗಿರುತ್ತದೆಯೆಂದರೆ, ಅದು ಅವರ ತಲೆಯ ಮೇಲೆ ಹೇಗೆ ನಿಂತಿದೆಯೆಂಬುದು, ಪೈಸಾದ ಗೋಪುರದಂತೆ (Leaning Tower of Pisa) ಭೌತವಿಜ್ಞಾನಿಗಳಿಗೇ ಒಂದು ಸಮಸ್ಯೆಯಾಗುತ್ತದೆ.

ಅಂತೂ ಟೋಪಿ ನಮ್ಮೆಲ್ಲರ ಜೀವನದಲ್ಲಿ ಬಹಳ ಮುಖ್ಯವಾದ ಪಾತ್ರವನ್ನು ವಹಿಸಿದೆ. ಅನಾದಿ ಕಾಲದಿಂದಲೂ ಅದರ ಉಪಯೋಗ ಅಸ್ಖಲಿತವಾಗಿದೆ. ಅದರ ಮೇಲೆ ಉದ್ಗ್ರಂಥಗಳನ್ನು ಬರೆದರೂ ಅದರ ಚರಿತ್ರೆ ಮುಗಿಯುವುದಿಲ್ಲ. ಇಂತಹ ಅನಂತವಾದುದಕ್ಕೆ ಹೆದರಿಯೇ ಇಲ್ಲಿಯವರೆಗೂ ಯಾರೂ ಅಂತಹ ಮಹತ್ಕಾರ್ಯಕ್ಕೆ ಕೈಹಾಕಿಲ್ಲ. ಎಲೆಯ ಮರೆಯ ಕಾಯಿಯಂತೆ ಪ್ರಕೃತಿಯ ಪ್ರಕೋಪದ ಪ್ರಹಾರಗಳಿಂದ ನಮ್ಮೆಲ್ಲರ ಅಮೂಲ್ಯವಾದ ತಲೆಗಳನ್ನು ರಕ್ಷಿಸಿ, ಒಬ್ಬೊಬ್ಬ ವ್ಯಕ್ತಿಗೂ ಅವನವನ ವೈಶಿಷ್ಟ್ಯದ ಕುರುಹಾಗಿರುವ ಟೋಪಿಯ ಮಹತ್ತ್ವವೆಷ್ಟು! "A man is known by the cap he wears" ಎಂದು ಧಾರಾಳವಾಗಿ ಹೇಳಬಹುದು.

**ಕೆ. ಪಿ. ರಾಮಕೃಷ್ಣ**

## ಗುರು ಮಹಿಮೆ

ವಿದ್ಯೆ ಕಲಿತಡೆ ಇಲ್ಲ, ಬುದ್ಧಿ ಕಲಿತಡೆ ಇಲ್ಲ;
ಉದ್ಯೋಗ ಮಾಡಿದಡೆ ಇಲ್ಲ; ಗುರುಮುಖವು
ಇದ್ದಲ್ಲದಿಲ್ಲ—ಸರ್ವಜ್ಞ.

ಪರಮನಾ ರೂಪದಲಿ ನೆರವೀಯಲರಿಯದಲೆ!
ನರನಾಗಿ ಬಂದು ವರವೀವ ಗುರುವಿಂಗೆ
ಸರಿ ಯಾರ ಕಾಣೆ ಸರ್ವಜ್ಞ.

ಸಾಣೆಕಲ್ಲೊಳು ಗಂಧ ಮಾಣದಲೆ ಎಸೆವಂತೆ
ಜಾಣ ಸದ್ಗುರುವಿನುಪದೇಶದಿಂ ಮುಕ್ತಿ
ಕಾಣಿಸುತ್ತಿಹುದು ಸರ್ವಜ್ಞ!

# ಬಿಟ್ಟು ಟೋಪಿ!

ನಮ್ಮ ಜನಾಂಗದಲ್ಲಿ ತಲೆಗೆ ಭೂಷಣವಾಗಿ ಯಾವುದಾದರೂ ಒಂದು ಉಡುಪು ಇರಬೇಕು. ಧನಿಕರೂ ದೊಡ್ಡ ಅಧಿಕಾರಿಗಳೂ ಜರತಾರಿಯ ರುಮಾಲನ್ನು ಹಾಕಿಕೊಳ್ಳುತ್ತಾರೆ. ಮಧ್ಯಮ ವರ್ಗದವರು ಜರತಾರಿಯಿಲ್ಲದ ರುಮಾಲನ್ನಾಗಲಿ, ಕಡೆಯ ಪಕ್ಷ ಒಂದು ಟೋಪಿಯನ್ನಾಗಲಿ ಧರಿಸುತ್ತಾರೆ. ಬಡ ಬೋರೇ ಗೌಡನನ್ನು ನೋಡಿ: ಅವನ ತಲೆಯ ಮೇಲೆ ಮೂರುವರೆ ಮೊಳದ ಕೆಂಪು ವಸ್ತ್ರದ ಅಥವಾ ಹರುಕು ಪಂಚೆಯ ಒಂದು ಸಿಂಬಿಯನ್ನು ಕಾಣಬಹುದು. ಹತ್ತಾರು ವರ್ಷಗಳಿಂದ ನಮ್ಮ ಜನ ತಲೆಯ ಉಡುಪಿನ ಉಪಯೋಗ ಕಡಮೆ ಮಾಡಿದ್ದಾರೆ. ಈಚೆಗೆ ಕೆಲವು ದಿನಗಳಿಂದ ಟೋಪಿಯ ಉಪಯೋಗ ಸ್ವಲ್ಪ ಮಟ್ಟಿಗೆ ಬಳಕೆಗೆ ಬಂದಿದೆ. ಕೆಲವು ಸಂದರ್ಭಗಳಲ್ಲಿ ಈ ತಲೆಯ ಉಡುಪಿನಿಂದಲೇ ಮನುಷ್ಯನ ಯೋಗ್ಯತೆ ಅಥವಾ ಕಾರ್ಯಗೌರವಗಳನ್ನು ಅಳೆಯಬಹುದು. ಈ ವಿಚಾರದಲ್ಲಿ ನಮ್ಮ ದೇಶದ ಟೋಪಿ ಅಥವಾ ಪೇಟಕ್ಕಿಂತ ಹೊರದೇಶದ ಹ್ಯಾಟ್ (Hat)ಗೆ ಹೆಚ್ಚು ಸನ್ಮಾನ ಅನೇಕ ವೇಳೆ ದೊರೆತಿದೆ, ಮತ್ತು ದೊರೆಯುತ್ತಿದೆ.

ನಮ್ಮಲ್ಲಿ 'ತಲೆಗೆ ಬಟ್ಟೆಯಿಲ್ಲದವನು' ಎಂಬ ಮಾತು ರೂಢಿಯಲ್ಲಿದೆ. ಇದರ ಅರ್ಥ ಲಂಗು ಲಗಾಮು, ದಿಕ್ಕು ದಿವಾಣ ಇಲ್ಲದವನು ಎಂದು. ಆದ್ದರಿಂದ ತಲೆಗೆ ಯಾವುದಾದರೂ ಒಂದು ಉಡುಪು ಇರಲೆಬೇಕು. ಮತ್ತೊಂದು ವಿಷಯ: ನಮ್ಮಲ್ಲಿ ತಲೆಗೆ ಬಟ್ಟೆಯಿಲ್ಲದೆ ಹೋಗುವುದು ಒಂದೇ ಒಂದು ಕೆಲಸಕ್ಕೆ; ಶವದ ಹಿಂದೆ ಶ್ಮಶಾನಕ್ಕೆ ಹೋಗುವುದು. ಈ ಕಾರಣಗಳಿಂದ ತಲೆಯ ಉಡುಪಿನ ಪ್ರಾಮುಖ್ಯತೆ ಎಷ್ಟೆಂದು ತಿಳಿಯಿತು.

ವಸ್ತುತಃ ಮಧ್ಯಮವರ್ಗದವರ ತಲೆಯ ಉಡುಪಾದ ಟೋಪಿಯನ್ನು ಸ್ವಲ್ಪ ನೋಡೋಣ. ಈ 'ಟೋಪಿ' ಎನ್ನುವ ಮಾತಿಗೆ ಎರಡು ಅರ್ಥ ಕೊಡಬಹುದು. ಒಂದು ಟೋಪಿ ಹಾಕಿಕೊಳ್ಳುವುದು, ಮತ್ತೊಂದು ಟೋಪಿ ಹಾಕುವುದು. ಟೋಪಿ ಹಾಕಿಕೊಳ್ಳುವುದೆಂದರೆ ತಲೆಗೆ ಭೂಷಣವಾಗಿ, ಮುಖಕ್ಕೆ ಒಪ್ಪುವ, ತಮಗೆ ಮತ್ತು ಇತರರಿಗೆ ಕಾಣುವ ಸರ್ವಸಾಮ್ಯವಾದ ಟೋಪಿಯನ್ನು ತಮ್ಮ ಕೈಯಿಂದ ತಾವೇ ತೆಗೆದುಕೊಂಡು ತಲೆಯಮೇಲೆ

ಇಟ್ಟುಕೊಳ್ಳುವುದು. ಇದರಲ್ಲಿ ಹೆಚ್ಚು ವಿಶೇಷವಿಲ್ಲ. ಆದರೆ ಈ ಟೋಪಿ ಹಾಕುವುದರಲ್ಲಿ ಒಂದು ವಿಶೇಷವುಂಟು. ಇದು ಅರುವತ್ತುನಾಲ್ಕು ಕಲೆಗಳಲ್ಲಿ ಒಂದು. ಇಲ್ಲಿ "ಟೋಪಿ" ಎಂಬುದು ಯಾವುದೇ ಆಕಾರವಾಗಲಿ ಬಣ್ಣವಾಗಲಿ ಉಳ್ಳದ್ದಾಗಿರುವುದಿಲ್ಲ. ಅಲ್ಲದೆ ಈ 'ಟೋಪಿ' ಎಲ್ಲರಿಗೂ ಗೋಚರವಾಗುವುದಿಲ್ಲ. ಇದು ಕೇವಲ ಹಾಕುವವನಿಗೆ ಮಾತ್ರ ಮೊದಲು ಗೊತ್ತಿದ್ದು, ಹಾಕಿಸಿಕೊಂಡವನಿಗೆ ತರುಣದಲ್ಲೋ, ಕೆಲವು ಸಂದರ್ಭಗಳಲ್ಲಿ ಅನೇಕ ದಿನಗಳಾದ ಮೇಲೋ ಅರಿವಾಗುವುದು. ಇದನ್ನೇ ಸರ್ವಸಾಮಾನ್ಯವಾಗಿ "ಮಖಮಲ್ ಟೋಪಿ" ಎಂದು ಕರೆಯುವುದು. ಈ ಮಖಮಲ್‌ಟೋಪಿ ಅನೇಕ ರೀತಿಯವಾದ್ದರಿಂದ, ಅದರ ಆಕಾರ, ಗುಣ, ಬಣ್ಣ, ಭಾರ ಇತ್ಯಾದಿಗಳನ್ನು ಹಾಕಿಸಿಕೊಂಡವರ ಅನುಭವದಿಂದ ತಿಳಿದುಕೊಳ್ಳಬೇಕೇ ಹೊರತು, ಬರವಣಿಗೆಯಲ್ಲಿ ತಿಣುಕಿದರೆ ಸ್ವಾರಸ್ಯ ಕಡಮೆಯಾದೀತೆಂದು ಹಾಗೆ ಮಾಡದೆ ಸರ್ವಸಾಮಾನ್ಯವಾದ ನಮ್ಮ, ನಿಮ್ಮ ಟೋಪಿಗಳನ್ನು ನೋಡೋಣ.

ಟೋಪಿಗಳು ಕಪ್ಪು, ಕೆಂಪು, ಬಿಳುಪು, ನೀಲಿ ಮುಂತಾದ ಬಣ್ಣ ಉಳ್ಳದ್ದಾಗಿರುತ್ತವೆ. ನಮ್ಮ ಜನರಲ್ಲಿ ರಾಜಕೀಯ ಮನೋಭಾವ ಅಷ್ಟಾಗಿ ಬೆಳೆಯುವುದಕ್ಕೆ ಮುಂಚೆ ಈ ಬಣ್ಣಗಳಿಗೆ ಯಾವ ಸಂಕೇತವೂ ಇರಲಿಲ್ಲ. ಜನಗಳು ಹೆಚ್ಚುಹೆಚ್ಚು ರಾಜಕೀಯಕ್ಕೆ ಇಳಿದ ಮೇಲೆ ಈ ಬಣ್ಣಗಳಿಗೆ ನಿರ್ದಿಷ್ಟಸಂಕೇತ ಬಂದಿತು. ಉದಾಹರಣೆಗೆ: ಕಾಂಗ್ರೆಸ್ ಸಂಸ್ಥೆಯವರು ಬಿಳಿ ಟೋಪಿಯನ್ನು ಹಾಕಿಕೊಳ್ಳುವ ಒಂದು ಸಂಕೇತವಿದೆ. ಹಾಗೇ ಹಿಂದೂ ಮಹಾಸಭೆಯವರು ಚಂದ್ರವರ್ಣದ ಟೋಪಿಯನ್ನು, ರಾಷ್ಟ್ರೀಯ ಸ್ವಯಂಸೇವಕ ಸಂಘದವರು ಕರಿಯ ಟೋಪಿಯನ್ನು ಸಂಕೇತವಾಗಿ ಇಟ್ಟುಕೊಂಡಿದ್ದಾರೆ. ಕೆಲವು ಜನ ಈ ಸಂಸ್ಥೆಗಳನ್ನು ಕುಚೋದ್ಯಮಾಡಲು ಟೋಪಿಗೇ ಅತಿ ಪ್ರಾಮುಖ್ಯತೆ ಕೊಟ್ಟು, "ಕರಿಟೋಪಿ ಸಂಘ", "ಬಿಳಿಟೋಪಿ ಜನ" ಎಂದು ಆಡುತ್ತಾರೆ. ಸ್ವರಾಜ್ಯ ಬಂದ ಮೇಲೆ ಈ ಬಿಳಿ ಟೋಪಿಗಳನ್ನು ಬಹುಜನದ ತಲೆಯ ಮೇಲೆ ನೋಡುತ್ತಿದ್ದೇವೆ. ಜನಗಳಿಗೆ ಬಿಳಿ ಬಣ್ಣದ ಮೇಲೆ ಮಮತೆಯೋ ಅಥವಾ ಈ ಸಂಕೇತವುಳ್ಳ ಸಂಸ್ಥೆಯ ಮೇಲೆ ಮಮತೆಯೋ, ಅಥವಾ ಇನ್ನೇನು ಕಾರಣವೋ ಈ ಟೋಪಿಯ ಉಪಯೋಗ ಬಹುವಾಗಿದೆ. ಈ ಸಂಸ್ಥೆಗಳಲ್ಲಿ ಒಂದಾದರೂ ಪೇಟವನ್ನು ಏಕೆ ಸಂಕೇತವಾಗಿ ಇಟ್ಟುಕೊಳ್ಳಲಿಲ್ಲವೋ!

ಇನ್ನು ಈ ಟೋಪಿಗಳ ಆಕಾರವನ್ನು ತೆಗೆದುಕೊಳ್ಳೋಣ. ಇವು ಎರಡು ತರಹೆಯಾಗಿರುತ್ತವೆ. ಒಂದು ಉದ್ದನೆಯ ಟೋಪಿ, ಮತ್ತೊಂದು ಗುಂಡು ಟೋಪಿ. ಈ ಟೋಪಿಗಳೆಲ್ಲವೂ ಸಾಮಾನ್ಯವಾಗಿ ರಟ್ಟಿನಿಂದ ಮಾಡಿ, ರಟ್ಟನ್ನು ಮುಚ್ಚಲು ಮೇಲೆ ಬಟ್ಟೆಯನ್ನೂ ತುಪ್ಪಟವನ್ನೂ ಹೊದ್ದಿಸಿರುತ್ತಾರೆ. ಈ ಮಾತು ಗುಂಡುಟೋಪಿಗಳಿಗೆಲ್ಲಾ ಅನ್ವಯಿಸುತ್ತದೆ. ಉದ್ದನೆ ಟೋಪಿಗಳು ರಟ್ಟಿಲ್ಲದೆ ಕೇವಲ ಬಟ್ಟೆಯವೇ ಇರುತ್ತವೆ. ನಮ್ಮ ದೇಶದ ರಾಜಕೀಯ ಸಂಸ್ಥೆಗಳವರಲ್ಲಿ ರಟ್ಟಿಲ್ಲದ ಬರಿ ಬಟ್ಟೆಯ ಟೋಪಿಯನ್ನೇ ಉಪಯೋಗಿಸುವ ಒಂದು ವೈಶಿಷ್ಟ್ಯವನ್ನು ನೋಡಬಹುದು. ಇದಕ್ಕೆ ಕಾರಣವೇನೆಂಬುದು ತಿಳಿಯದಾಗಿದೆ. ರಟ್ಟಿನ ಟೋಪಿಗೂ ಬಟ್ಟೆ ಟೋಪಿಗೂ ಒಂದೇ ಒಂದು ವ್ಯತ್ಯಾಸ. ಬಟ್ಟೆಟೋಪಿ ಕೊಳೆಯಾದರೆ ಒಗೆದು ಉಪಯೋಗಿಸಬಹುದು. ರಟ್ಟಿನ ಟೋಪಿ ಹಾಗೆ ಮಾಡಲು ಸಾಧ್ಯವಿಲ್ಲ. ಅದನ್ನು ಸಹಿಸುವಷ್ಟು ಕೊಳೆಯಾಗುವ ವರೆಗೆ ಮಾತ್ರ ಉಪಯೋಗಿಸಬಹುದು. ಈ ಸಂದರ್ಭದಲ್ಲಿ ನನ್ನ ಚಿಕ್ಕಂದಿನ ಅನುಭವ ಹೇಳಬಯಸುತ್ತೇನೆ. ನಾನು ಪ್ರಾಥಮಿಕ ಶಾಲೆಯಲ್ಲಿರುವಾಗ ನಮ್ಮ ತಂದೆ ಒಂದು ಬೂದು ಬಣ್ಣದ ಟೋಪಿಯನ್ನು ತಂದು ಕೊಟ್ಟರು. ಅದನ್ನು ಕಂಡರೆ ನನಗೆ ಬಹಳ ಪ್ರೀತಿ. ಅದರ ಮೇಲಿನ ಮಮತೆ ಎಷ್ಟಿತ್ತೆಂದರೆ ಅದನ್ನು ಎಡೆಬಿಡದೆ ಮಲಗುವಾಗ ಕೂಡ ಹಾಕಿಕೊಂಡು ನಿದ್ದೆಮಾಡುತ್ತಿದ್ದೆ. ಈ ನನ್ನ ಅತಿ ವಿಶ್ವಾಸವನ್ನು ಆ ಟೋಪಿ ಎಷ್ಟು ತಾನೆ ಸಹಿಸೀತು! ಅದೂ ಸಿಟ್ಟುಗೊಂಡು ಕೊಳೆಯಾಗಲು ಪ್ರಾರಂಭಿಸಿತು. ಶಾಲೆಗೆ ಅದನ್ನೇ ಹಾಕಿಕೊಂಡು ಹೋಗುತ್ತಿದ್ದೆನಾದ್ದರಿಂದ "ಕೊಳೆ ಟೋಪಿ" ಎಂದು ಸಹಪಾಠಿಗಳು ನಾಮಕರಣ ಮಾಡಿದರು. ಈ ಅವಹೇಳನವನ್ನು ಸಹಿಸಲಾರದೆ ಒಂದು ದಿನ ಶಾಲೆಯಿಂದ ಬಂದ ತಡವೇ ಆ ಟೋಪಿಯನ್ನು ನೀರಿನಲ್ಲಿ ಅದ್ದಿ ಸಾಬೂನು ತಿಕ್ಕಿದೆ. ಕೊಂಚ ಹೊತ್ತಿಗೆ ನನ್ನ ಸಹವಾಸ ಅದಕ್ಕೆ ತಪ್ಪಿತೋ ಎನ್ನುವ ನಗುಮುಖವನ್ನು ಸೂಚಿಸುವಂತೆ ಟೋಪಿ ಆಕಾರ ಕೆಟ್ಟು ನನ್ನ ಮುಖ ವಿಕಾರವಾಯಿತು. ಗಟ್ಟಿಯಾಗಿ ಅಳಲು ಪ್ರಾರಂಭಿಸಿದೆ. ನಮ್ಮ ತಾಯಿ ಬಂದು 'ರಟ್ಟಿನ ಟೋಪಿಯನ್ನು ಏಕೆ ಒಗೆದೆಯೋ, ಪೆಚ್ಚೆ!' ಎಂದು ಹೇಳಿದಾಗ ಟೋಪಿಯ ಬಗೆಗಳು ಅರಿವಾದವು.

ಸಾಧಾರಣವಾಗಿ ಉದ್ದನೆ ಟೋಪಿಗಳು ಬಟ್ಟೆಯಿಂದ ಹೊದ್ದಿಸಿದವೇ

ಆಗಿರುತ್ತವೆ. ತುಪ್ಪಟದವು ಈ ಬಗೆಯಲ್ಲಿ ಅತಿ ಅರಳ. ಗುಂಡು ಟೋಪಿಗಳು ರಟ್ಟಿನಿಂದ ಮಾಡಲ್ಪಟ್ಟು ಬಟ್ಟೆಯಿಂದಾಗಲಿ ತುಪ್ಪಟದಿಂದಾಗಲಿ ಮುಚ್ಚಿ ರುತ್ತವೆ. ತುಪ್ಪಟದಿಂದ ಹೊದ್ದಿಸಿರುವುದನ್ನು ಫ಼ರ್‌ಕ್ಯಾಪ್ (Fur cap) ಎಂದು ಕರೆಯುತ್ತಾರೆ. ಕೆಲವು ಟೋಪಿಗಳಿಗೆ ಮಕ್‌ಮಲ್ ಬಟ್ಟೆ ಹಾಕಿ, ಒಳಗೆ ಕೃಷ್ಣನ ಚಿತ್ರವನ್ನಿಟ್ಟು ಚಮಿಕಿಯಿಂದ ಸುತ್ತಲೂ ಕೆಲಸಮಾಡಿರುತ್ತಾರೆ. ಇದು ಸಾಧಾರಣವಾಗಿ ಗುಂಡು ಟೋಪಿಯೆ. ನನ್ನ ಚೂಡಾಕರ್ಮದಲ್ಲಿ ನನ್ನ ಅಜ್ಜಿ ನನಗೆ ಇಂತಹದನ್ನು ತಂದು ಕೊಟ್ಟಿದ್ದರು. ಆಗಿನ ಕಾಲದಲ್ಲಿ ಈ ಟೋಪಿಗೆ ಐದು ರೂಪಾಯಿ ಬೆಲೆಯಿತ್ತಂತೆ. ಈ ಟೋಪಿಯನ್ನು ಸಾಮಾನ್ಯವಾಗಿ ಮಕ್ಕಳು ಹಾಕಿಕೊಳ್ಳುತ್ತಿದ್ದರು. ಆದರೆ ಈಗ ಇದು ಕಣ್ಮರೆಯಾಗಿದೆ. ಗುಂಡು ಟೋಪಿಯಲ್ಲಿ ಇನ್ನೂ ಒಂದು ತರಹವುಂಟು. ಇದು ಮುಸ್ಲಿಂ ಜನಾಂಗಕ್ಕೇ ಮೀಸಲು. ಇದು ಕೆಂಪು ಬಟ್ಟೆಯಿಂದ ಮುಚ್ಚಿದ ರಟ್ಟಿನ ಗುಂಡು ಟೋಪಿ. ಇದಕ್ಕೆ ಮೇಲ್ಗಡೆ ಮಧ್ಯ ಭಾಗದಲ್ಲಿ ಒಂದು ಗುಬುಟು ಉಂಟು; ಅದಕ್ಕೆ ಸೇರಿದಂತೆ ಒಂದು ಕುಚ್ಚು ಇರುತ್ತದೆ. ಈ ಕುಚ್ಚು ಧರಿಸಿದವನ ನಡಿಗೆಗೆ ತಕ್ಕಂತೆ ನರ್ತನ ಮಾಡುತ್ತದೆ. Dance.

ನಾನು ಚಿಕ್ಕವನಾಗಿದ್ದಾಗ ನಮ್ಮ ಅಣ್ಣ ಒಂದು ಗುಂಡು ಟೋಪಿ ಹಾಕಿ ಕೊಳ್ಳುತ್ತಿದ್ದರು. ಅದನ್ನು ಎಲ್ಲರೂ "ಹಾಸನದ ಟೋಪಿ" ಎಂದು ಕರೆಯು ತ್ತಿದ್ದರು. ಅದು ಹಾಸನದಲ್ಲೇ ತಯಾರಾಗದಿದ್ದರೂ ಅದಕ್ಕೆ ಈ ಹೆಸರು ಬಂದಿತ್ತು. "ಗೋಖಲೆ ಟೋಪಿ" ಎಂದು ಒಂದು ಉಂಟು. ಈ ಟೋಪಿ ಯನ್ನು ಗೋಖಲೆಯವರು ಸಾಮಾನ್ಯವಾಗಿ ಹಾಕಿಕೊಳ್ಳುತ್ತಿದ್ದರಿಂದ ಈ ಹೆಸರು. ಇದೂ ಒಂದು ಗುಂಡು ಟೋಪಿ. ಅದರ ತಲೆಯ ಮಧ್ಯದಲ್ಲಿ ಗೋಪುರ ದಂತೆ ಎರಡು ಅಂಗುಲದಷ್ಟು ಹೊರಚಾಚಿಕೊಂಡಿರುತ್ತದೆ. ಇದನ್ನು ಹೆಚ್ಚಾಗಿ ಮೈಸೂರಿನವರು ಯಾರೂ ಉಪಯೋಗಿಸಿಲ್ಲ. ಮತ್ತೊಂದು ಟೋಪಿ: ಇದನ್ನು ಹುಡುಗರು "Buffoon ಟೋಪಿ" ಎಂದು ಕರೆಯುತ್ತಾರೆ. ಇದು ಸಾಮಾನ್ಯ ವಾಗಿ ಬಣ್ಣದ ಕಾಗದದಲ್ಲಿ ಮಾಡಿರುತ್ತದೆ. ಅಂಗಡಿಯವರು ಸಾಮಾನು ಕಟ್ಟುವ ಪೊಟ್ಟಣದಂತೆ ಅಡಿಯಲ್ಲಿ ಅಗಲವಿದ್ದು ಬರಬರುತ್ತಾ ಸಣ್ಣದಾಗಿ ಬಂದು ಚೂಪಾದ ಮೂತಿಯಲ್ಲಿ ಕೊನೆಗೊಳ್ಳುತ್ತದೆ. ಇದು ವಿದೂಷಕನು ತನ್ನ ನಗೆಗೇಡಿತನವನ್ನು ತೋರಿಸಿಕೊಳ್ಳಲು ಹಾಕಿಕೊಳ್ಳುತ್ತಾನೆ. ಇದಲ್ಲದೆ

"ಹೂವಿನ ಟೋಪಿ" ಎಂಬುದೂ ಉಂಟು. ಇದನ್ನು ಸಾಮಾನ್ಯವಾಗಿ ದೇವರ ಉತ್ಸವಗಳಲ್ಲಿ ದೇವರ ಮುಂದೆ ಕುಣಿದಾಡುತ್ತಾ ಬರುವವರು ಹಾಕಿಕೊಳ್ಳುತ್ತಾರೆ. ಇದೂ "Buffoon ಟೋಪಿ"ಯಂತೆಯೇ ಇರುತ್ತದೆ. ಇದನ್ನು ಬಿದಿರಿನಲ್ಲಿ ಹೆಣೆದು ಸುತ್ತಲೂ ಹೂವು ಪೋಣಿಸಿ ಕಟ್ಟಿರುತ್ತಾರೆ. ಇದನ್ನು ಧರಿಸಿದವನಿಗೆ ಒಂದು ದೇವತ್ವದ ಸ್ಥಾನ ಸಿಕ್ಕಿರುತ್ತದೆ.

ಇದುವರೆಗೆ ನಮ್ಮ ದೇಶದ ಟೋಪಿಗಳನ್ನು ಚರ್ಚಿಸಿದ್ದಾಯಿತು. ಪರ ದೇಶದ್ದಾದರೂ ನಮ್ಮ ದೇಶದಲ್ಲೂ ಬಳಕೆಯಲ್ಲಿರುವ ಹ್ಯಾಟಿ (Hat)ನ ವಿಚಾರ ಹೇಳದಿದ್ದರೆ ಕೆಲವರಿಗೆ ಕೋಪಬರಬಹುದು. ಆದ್ದರಿಂದ ಅದನ್ನೂ ಪರಿಶೀಲಿಸೋಣ. "ಹ್ಯಾಟು" ಬೆಂಡಿನಿಂದ ಮಾಡಿರುತ್ತದೆ. ಇದನ್ನು ಸಾಮಾನ್ಯವಾಗಿ ಖಾಕಿಬಟ್ಟೆಯಿಂದ ಮುಚ್ಚಿರುತ್ತಾರೆ. ಇದು ಹೆಚ್ಚು ಕಡಮೆ ನಮ್ಮ ಗುಂಡುಟೋಪಿಯಂತೆ ಇರುತ್ತದೆ. ಆದರೆ ಕೆಳಭಾಗದಲ್ಲಿ ಸುತ್ತಲೂ ಒಂದು ಒಂದೂವರೆ ಅಂಗುಲದಷ್ಟು ಹೊರಚಾಚಿರುತ್ತದೆ. ಇದೇ ಟೋಪಿಯನ್ನು ಬಿದಿರಿನಲ್ಲಿ ಮಾಡಿ, ತೋಟದ ಕೆಲಸಗಾರರು ಉಪಯೋಗಿಸುತ್ತಾರೆ. ಈ ಹ್ಯಾಟ್ ಉಣ್ಣೆಬಟ್ಟೆಯಿಂದ ಮಾಡಿದ್ದರೆ ಅದನ್ನು "felt hat" ಅಥವಾ "evening hat" ಎಂದು ಕರೆಯುತ್ತಾರೆ. ಇದೆಲ್ಲಾ ಏಕೆ ಹೇಳಿದೆ ಎಂದರೆ, ನಮ್ಮ ದೇಶದ ಹಳ್ಳಿಗಾಡಿನ ಜನ ಹ್ಯಾಟನ್ನೂ 'ಟೋಪಿ' ಎಂದೇ ಕರೆಯುತ್ತಾರೆ. ಹಳ್ಳಿಗಾಡಿನಲ್ಲಿ 'ಯಾರೋ ಟೋಪಿಯವರು ಬಂದಿದ್ದಾರೆ' ಎಂದರೆ ಹ್ಯಾಟುಧಾರಿಗಳಾದ ಇಂಗ್ಲಿಷಿನವರು ಅಥವಾ ಉನ್ನತ ಅಧಿಕಾರದಲ್ಲಿರುವ ನಮ್ಮವರು ಎಂದು ಅರ್ಥ. ಈ ಹ್ಯಾಟಿಗೆ "ಒರಳುಕಲ್ಲು," "ಕುಕ್ಕೆ"ಮುಂತಾದ ಗುಣವಾಚಕಗಳನ್ನು ಹಳ್ಳಿಯವರು ಕೊಟ್ಟಿರುತ್ತಾರೆ.

ಇನ್ನು ಟೋಪಿ ಧರಿಸುವ ವೈಶಿಷ್ಟ್ಯ: ಸಾಮಾನ್ಯವಾಗಿ ಗುಂಡುಮುಖದವರು ಗುಂಡುಟೋಪಿಯನ್ನೂ, ಕೋಲುಮುಖದವರು ಉದ್ದ ಟೋಪಿಯನ್ನೂ ಹಾಕಿಕೊಳ್ಳುವರು. ಈ ಟೋಪಿ ಇಟ್ಟುಕೊಳ್ಳುವ ರೀತಿಯನ್ನು "ವರಸೆ" ಎಂದು ಕರೆಯುತ್ತಾರೆ. ಕೆಲವರು ಟೋಪಿಯನ್ನು ನೇರವಾಗಿ ತಲೆಯ ಮಧ್ಯ ಭಾಗಕ್ಕೆ ಇಟ್ಟುಕೊಳ್ಳುತ್ತಾರೆ; ಇದು ನೋಡಲು ಲಕ್ಷಣವಾಗಿರುತ್ತದೆ. ಮತ್ತೆ ಕೆಲವರು ತಲೆಯ ಎಡಭಾಗಕ್ಕೋ ಬಲಭಾಗಕ್ಕೋ ವಾಲಿಸಿಟ್ಟುಕೊಳ್ಳುತ್ತಾರೆ. ದೊಡ್ಡ ಹಣೆಯುಳ್ಳವರು ಟೋಪಿಯನ್ನು ತಲೆಯ ಹಿಂಭಾಗಕ್ಕೆ ಸೇರಿಸಿರು

ತ್ತಾರೆ. ಕೆಲವರು ಹಣೆ ಮುಚ್ಚುವಂತೆ, ಮುಂಭಾಗಕ್ಕೆ ಹುಬ್ಬು ಮುಟ್ಟುವಂತೆ ಹಾಕಿಕೊಳ್ಳುತ್ತಾರೆ. ಕೆಲವರು ಉದ್ದನೆ ಟೋಪಿಯನ್ನು ತೆಗೆದು ತಲೆಯ ಮೇಲೆ ಅಡ್ಡಲಾಗಿ ಇರಿಸಿಕೊಳ್ಳುತ್ತಾರೆ. ಇದು ನೋಡಲು ಅಸಹ್ಯವಾಗಿ ಕಂಡರೂ ಅವರು ಹಾಗೇ ಇಟ್ಟುಕೊಳ್ಳುತ್ತಾರೆ. ಇದರಿಂದ ಅವರಿಗೆ ಏನು ಸಂತೋಷವೋ ತಿಳಿಯದು. ಹಲವರು ಕಿವಿಗಳನ್ನು ಟೋಪಿ ಒಳಗೆ ಸೇರುವಂತೆ ಅವುಕಿ ಸೇರಿಸಿರುತ್ತಾರೆ. ಕೆಲವು ಮಿಲಿಟರಿ ಜನರು ಟೋಪಿಯನ್ನು ತಲೆಯ ಮೇಲೆ ಇಡುವುದಕ್ಕೆ ಬದಲಾಗಿ ಎಡದ ಕಿವಿ ಮುಚ್ಚುವಂತೆ ಧರಿಸಿರುತ್ತಾರೆ. ಇನ್ನು ಕೆಲವರು "ವರಸೆ ಗಿರಸೆ" ನಮಗೆ ಏಕೆ, ತಲೆ ಮುಚ್ಚಿದರೆ ಸಾಕು ಎಂದು ತಲೆ ಮೇಲೆ ಹೇಗೆ ಕುಳಿತುಕೊಳ್ಳುತ್ತೋ ಹಾಗೆ ಬಿಟ್ಟಿರುತ್ತಾರೆ.

ಇಷ್ಟೆಲ್ಲಾ ಹೇಳುವ ನಾನು ಹೇಗೆ ಧರಿಸುತ್ತೇನೆ, ಯಾವ ಟೋಪಿ ಧರಿಸುತ್ತೇನೆ ಎಂದು ಕೇಳಬಹುದು. ನಾನು ಟೋಪಿ ಧರಿಸುವುದಿಲ್ಲ ಎಂದ ಮಾತ್ರಕ್ಕೆ ನನಗೆ ಅದನ್ನು ಕಂಡರೆ ತಾತ್ಸಾರವಿಲ್ಲ. ಆದರೆ ಏನೋ ಒಂದು ತರಹವಾಗುತ್ತೆ, ಆದ್ದರಿಂದ ಉಪಯೋಗಿಸುವುದಿಲ್ಲ. ಒಂದು ವೇಳೆ ಉಪ ಯೋಗಿಸಿದೆ ಎನ್ನಿ, ಕಂಡವರ ಹತ್ತಿರವೆಲ್ಲ 'ಏನು ಟೋಪಿ ಹಾಕಿಸಿಕೊಂಡಿ ದ್ದೀರಿ?' ಎಂದು ಕೇಳಬೇಕಾಗುತ್ತೆ. ಜೊತೆಗೆ ಟೋಪಿ ಹಾಕಿಕೊಳ್ಳುವವರು ಎಷ್ಟೇ ದೊಡ್ಡವರಿರಲಿ, "ಹುಡುಗ" ಎಂತಲೇ ಜನ ಕರೆಯುತ್ತಾರೆ. ಅಲ್ಲದೆ ಟೋಪಿ ಹಾಕಿಕೊಂಡು ಬಳೆಪೇಟೆ ಚಿಕ್ಕಪೇಟೆಗಳಲ್ಲಿ ಕತ್ತು ಬಗ್ಗಿಸಿಕೊಂಡು ಹೋಗುತ್ತಿದ್ದೆ ಅನ್ನಿ; ಹಿಂದಿನಿಂದ ಜಟಕ ಸಾರಥಿಗಳು ತಮ್ಮ ರಥಕ್ಕೆ ದಾರಿ ಮಾಡಿಕೊಳ್ಳಲು "ಏ ಟೋಪಿ, ಏ ಟೋಪಿ, ಬಾಜು!" ಎಂದು ಕೂಗುಹಾಕಿ ಸುತ್ತಮುತ್ತ ಇರುವ ಹುಡುಗರು ಲೇವಡಿಮಾಡಿಯಾರು ಎಂದು ಭಯ ಬೇರೆ. ಆದ್ದರಿಂದ ಈ ಟೋಪಿಗಳನ್ನೆಲ್ಲಾ ಸೇರಿಸಿ "ಟೋಪಿ" ಎಂಬ ಪ್ರಬಂಧ ಮಾಡಿ ಹಾಕಿದ್ದೇನೆ. ಹಾಕಬೇಕೆಂದು ಹೊರಟಿದ್ದೇನೆ, ಯಾರಿಗೆ ಹಿಡಿಸುತ್ತೋ ನೋಡಬೇಕು.

**ಬಿ. ಎಸ್. ಅನಂತನಾರಾಯಣ**

---

ಬಿ. ಬಿ. ಡಿ. ಪವರ್ ಪ್ರೆಸ್, ಅರಳೇಪೇಟೆ, ಬೆಂಗಳೂರು ಸಿಟಿ

## ಬೆಂಗಳೂರು ಸೆಂಟ್ರಲ್ ಕಾಲೇಜ್
# ಕರ್ಣಾಟಕ ಸಂಘದ ಪ್ರಕಟನೆಗಳು

---

೧. **ಶ್ರೀ ಕೈಲಾಸಂ ಅವರ ಸ್ಮರಣೆ** — ರೂ. ೨/೪
ಶ್ರೀ ಕೆ. ವಿ. ಅಯ್ಯರ್ ಬರೆದದ್ದು.

೨. **ಕರ್ಣಾಟಕ ಮಾಲವಿಕಾಗ್ನಿಮಿತ್ರ ನಾಟಕಂ** — ರೂ. ೧/೧೨
ಆಸ್ಥಾನ ವಿದ್ವಾನ್ ಪ್ರೊ. ಶಂ. ಸುಬ್ರಹ್ಮಣ್ಯ ಶಾಸ್ತ್ರಿಗಳ ಅನುವಾದ.

೩. **ಮೊನ್ನ ವನ್ನ** (ಮೂರು ಅಂಕಗಳ ನಾಟಕ) — ರೂ. ೨/-
ಬೆಲ್ಜಿಯಂ ದೇಶದ ಮಾರಿಸ್ ಮ್ಯಾಟರ್‌ಲಿಂಕ್ ಮಹಾಕವಿಯ ನಾಟಕದ ಅನುವಾದ. ಶ್ರೀ ಎಸ್. ಜಿ. ಶಾಸ್ತ್ರೀ ಅವರು ಮಾಡಿದ್ದು.

೪. **ನಾಗನ ಪದಗಳು** — ರೂ. ೧/೪
ಶ್ರೀ ಜಿ. ಪಿ. ರಾಜರತ್ನಂ ಬರೆದವು. 'ರತ್ನನ ಪದಗಳು' ಜಾತಿಯವು.

೫. **ಬಾಲ ಸರಸ್ವತಿ** (೩೬ ಬೇರೆ ಬೇರೆ ಕೃತಿಗಳು) — ರೂ. ೨/೮
ಸೆಂಟ್ರಲ್ ಕಾಲೇಜ್ ಕರ್ಣಾಟಕ ಸಂಘದ ಸದಸ್ಯರಿಂದ.

೬. **ನಮ್ಮ ನಮ್ಮವರು** (೬೬ ಬೇರೆ ಬೇರೆ ಕೃತಿಗಳು) — ರೂ. ೨/೮
ಮೈಸೂರು ವಿಶ್ವವಿದ್ಯಾನಿಲಯದ ಇಂಟರ್ ವಿದ್ಯಾರ್ಥಿಗಳಿಂದ.

೭. **ಚಿನ್ನದ ದೋಸೆ ಮತ್ತು ಇತರ ಕಥೆಗಳು** — ಹನ್ನೆರಡಾಣೆ
ಸಂಘದ ಸದಸ್ಯರು ಸಂಗ್ರಹಿಸಿದ ಎಂಟು ಜಾನಪದ ಕಥೆಗಳು.

೮. **ಶಕ್ತಿ** (ಸಚಿತ್ರ) — ರೂ. ೩/-
ಶ್ರೀ ಆರ್. ಎಲ್. ನರಸಿಂಹಯ್ಯ ಅವರ ವಿಜ್ಞಾನ ಗ್ರಂಥ.

೯. **ಮಕ್ಕಳ ಮಾತು** (ಕಾಲೇಜ್ ಬರವಣಿಗೆ) — ರೂ. ೧/-

೧೦. **ಪಚ್ಚೆಯ ತೆನೆ** (ಕಾಲೇಜ್ ಬರವಣಿಗೆ) — ರೂ. ೧/-

೧೧. **ಗಂಧದ ಹುಡಿ** (ಕಾಲೇಜ್ ಬರವಣಿಗೆ) — ರೂ. ೧/-

---

**ಕರ್ಣಾಟಕ ಸಂಘ, ಸೆಂಟ್ರಲ್ ಕಾಲೇಜ್, ಬೆಂಗಳೂರು**